Photo by P. K. Patel



ಬಹುಮಾನ
ಪಡೆದ ಶೀರ್ಷಿಕೆ

ಬಾಲಕನ ಹೆಬ್ಬಯಕೆ

ಕಳಿಸಿದವರು :
ಶ್ರೀಮತಿ ರಮಾ, ಮಂಗಳೂರು

# ಈ ಸಂಚಿಕೆಯ ಲ್ಲಿ




| ವಿಷಯ | | ಪುಟ |
|---|---|---|
| ನಂಬುಗೆಯ ಆಳು | .... | 11 |
| ನಾಯಿಯ ನ್ಯಾಯ | ... | 13 |
| ಶಬ್ದವೇಧಿ | ... | 17 |
| ದೊಡ್ಡವರ ಸಹವಾಸ | ... | 25 |
| 9 ರ ಮಹತ್ತು | ... | 28 |
| ಶಾಂತಿದೇವತೆ | .... | 29 |
| ಸುಂದರಮೂರ್ತಿ | .... | 33 |
| ಕಾಗದದ ಪಾತ್ರೆಯಿಂದ | ... | 38 |
| ತಿಳಿಗೇಡಿ | ... | 39 |
| ಮುಖಚಿತ್ರ | ... | 43 |
| ಕೃತಕ ಮುತ್ತಿಗೆ | ... | 44 |
| ಅಮೂಲ್ಯ ಪುಣ್ಯ | ... | 50 |
| ಜೇನ್ನೊಣ ಏಕೆ ಕುಟುಕುವುದು? | ... | 56 |
| ಬಣ್ಣದ ಚಿತ್ರಕಥೆ | ... | 57 |


ಅಲ್ಲದೆ ಉತ್ತರ ಹೇಳು, ಒಂದೇ ಗೆರೆಯ ಚಿತ್ರ, ಟೈಪ್ ರೈಟಿಂಗ್ ಚಿತ್ರ, ಪದ್ಯ, ಫೋಟೋ ಸ್ಪರ್ಧೆ ಇತ್ಯಾದಿ.

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ....ಮದ್ರಾಸ್-26.

ಶೀಘ್ರದಲ್ಲಿ ಬರುತ್ತದೆ





ಭರಣಿ ರವರ

# ಚಂಡಿರಾಣಿ

ಭಾನುಮತಿ

ರಾಮಾರಾವ್.ರಂಗಾರಾವ್.ರೇಲಂಗಿ

ಡೈರೆಕ್ಷನ್...ಭಾನುಮತಿ * ನಿರ್ಮಾಪಕರು...ರಾಮಕೃಷ್ಣ

ಸ್ಟುಡಿಯೋ..ಭರಣಿ



DISTRIBUTORS FOR MYSORE:

**VIJAYA TALKIE DISTRIBUTORS, BANGALORE-2**

# ಚಂದಮಾಮ

ಸಂಚಾಲಕರು:
'ಚಕ್ರಪಾಣಿ'

ನಾವು ಪ್ರಾರಂಭಿಸಿದ ಟ್ರೈಸ್ ಸ್ಕೆಟಿಂಗ್ ಚಿತ್ರವನ್ನು ನೋಡಿ ಅನೇಕ ಕಡೆಗಳಿಂದ ಓದುಗರು ತರತರದ ಅಂತಹ ಚಿತ್ರಗಳನ್ನು ತಯಾರಿಸಿ ಕಳಿಸುತ್ತಿದ್ದಾರೆ. ಇದು ಸಂತೋಷದ ವಿಷಯ. ಅವುಗಳನ್ನು ಕ್ರಮವಾಗಿ ಚಂದಮಾಮದಲ್ಲಿ ತೋರಿಸುತ್ತೇವೆ. ಒಂದು ಮುಖ್ಯಮಾತು: ಟ್ರೈಪುಚಿತ್ರಗಳನ್ನು ದಪ್ಪವಾದ ಬಿಳಿಯ ಕಾಗದದಲ್ಲಿ ಕರೀ ರಿಬ್ಬನ್ ಉಪಯೋಗಿಸಿ ಚಿತ್ರಿಸಬೇಕು. ಹೀಗಿದ್ದರೇನೇ ಬ್ಲಾಕು ತಯಾರಿಸಲು ಸಾಧ್ಯವಾಗುತ್ತದೆ. ಮತ್ತು ಚಿತ್ರದಲ್ಲಾಗಲೀ, ಸುತ್ತಲಿನ ಬಾರ್ಡರಿನಲ್ಲಾಗಲೀ ಚಿತ್ರಗಾರರ ಹೆಸರು ಮುಂತಾದ್ದೇನೂ ಇರಕೂಡದು. ಫೋಟೋ ಶೀರ್ಷಿಕೆಯ ಕೂಪನ್ ಪದ್ಧತಿ ತೆಗೆದುಹಾಕಿದ್ದಕ್ಕೆ ಅನೇಕರು ತಮ್ಮ ಸಂತೋಷವನ್ನೂ ಉತ್ಸಾಹವನ್ನೂ ವ್ಯಕ್ತಪಡಿಸಿದ್ದಾರೆ.

ಸಂಪುಟ : ಆಗಸ್ಟ್ ೧೯೫೩ : ಸಂಚಿಕೆ
೧೧ ೨

# ನಂಬುಗೆಯ ಆಳು



ಹಿಂದಿದ್ದೊಬ್ಬ ನವಾಬನ ಬಳಿಯಲಿ
ಇದ್ದನೊಬ್ಬ ನೀಗ್ರೋ ಆಳು.
ಒಡೆಯನ ನೆರಳಿನ ಹಾಗೇ ಅವನು
ಇರುತ್ತಿದ್ದನು ಹಗಲಿರುಳು.

ಒಮ್ಮೆ ನವಾಬನ ಕೇಳಿದರೊಬ್ಬರು
'ಈ ಕುರೂಪಿ ನೀಗ್ರೊ ಮೇಲೆ,
ಇಷ್ಟು ಪ್ರೀತಿ ನಿಮಗೇತಕೆ?' ಎನ್ನಲು
ನವಾಬನೆಂದನು ಕತೆಯವೊಲೆ:



"ಹಿಂದೊಮ್ಮೆ ನಾನು ಬಳಗದೊಂದಿಗೆ
ಪಯಣವ ಕೈಕೊಂಡಾಗ
ಒಂಟೆ ಬಿದ್ದು ಪೆಟ್ಟಿಗೆಗಳು ಉರುಳಿ
ಮುತ್ತೆಲ್ಲಾ ಚೆಲ್ಲಿದುವಾಗ;

ಎಲ್ಲರು ತತ್ತರಿಸುತ್ತ ನಿಂತಿರಲು
ನಾನೆಂದೆನು 'ಈ ಮುತ್ತುಗಳ
ಯಾರೆಷ್ಟಾರಿಸಿಕೊಳ್ಳುವಿರೋ ಅದ
ನವರವರೇ ತೆಕ್ಕೊಳ್ಳಿರಲಾ!'

ಈ ಮಾತನು ಕೇಳುತ್ತಲೆಲ್ಲರೂ
ನಾಲ್ಕುಸುತ್ತಲೂ ಓಡಿದರು.
ನನ್ನ ವಿಚಾರವ ಮರೆತು ಎಲ್ಲರೂ
ಮುತ್ತುಗಳಾರಿಸ ತೊಡಗಿದರು.





"ನವಗಿರಿನಂದ"

ಧನ ವಿತ್ತರೆ ಎಷ್ಟೋ ಸೇವಕರು
ಬರುವರು ಎಲ್ಲೆಲ್ಲೂ ಬಹಳ;
ನಿಷ್ಕಲ್ಮಷ ಹೃದಯದ ನಿಜ ಸೇವಕ
ಸಿಕ್ಕುವುದೇ ತೀರಾ ವಿರಳ!"

ನವಾಬ ಹೇಳಿದ ಈ ಕತೆಕೇಳಿ,
ಎಲ್ಲರೊಲಿದು ತಲೆದೂಗಿದರು.
ಕರಿ ಕುರೂಪಿಯಾ ನೀಗ್ರೋ ಆಳನು
ಬಾಯಿತುಂಬ ಕೊಂಡಾಡಿದರು.

ಈ ನೀಗ್ರೋ–ಇವನೆನ್ನ ಬಳಿಯಲೇ
ನಿಂತಿದ್ದನು ಕದಲದೆ ಹಾಗೆ;
ನಾ ಕೇಳಿದೆ: 'ನಿನಗೇನುಬೇಕು?
ಮುತ್ತುಗಳ ಬಿಟ್ಟು ನಿಂತೆಯೆ ಹೀಗೆ?'

ಅದಕಿವನೆಂದನು: 'ಓ ಮಹಾ ಪ್ರಭೋ!
ಬೇಕೆನಗೆ ತಮ್ಮ ನಂಬುಗೆಯೆ.
ನೀವು ಕೊಡುವ ಮುತ್ತಿನ ಕಾಣಿಕೆಯ
ಕಂಡುಬ್ಬಿ ನಿಮ್ಮನಾ ಮರೆಯೆ'

ಈ ನುಡಿಯು ಕೇಳಿ ನನ್ನಮನದಲ್ಲಿ
ಎಷ್ಟೋ ಸಂತಸವಾಯ್ತು.
ಇಂತಹ ಆಳನು ಪಡೆದ ಒಡೆಯನೇ
ಧನ್ಯನೆಂದು ಮನ ಮೆಚ್ಚಿತ್ತು.





# ನಾಯಿಯ ನ್ಯಾಯ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಆಳುವ ಕಾಲದಲ್ಲಿ ಬೋಧಿಸತ್ವನು ರುದ್ರಭೂಮಿಯಲ್ಲಿ ನಾಯಿ ಜನ್ಮ ತಾಳಿ ನೂರಾರು ನಾಯಿಗಳ ಒಂದು ದೊಡ್ಡ ತಂಡಕ್ಕೆ ಹಿರಿಯನಾಗಿದ್ದನು.

ಒಂದು ದಿನ ರಾಜನು ಉತ್ತಮ ಜಾತಿಯ ಕುದುರೆಗಳನ್ನು ಕಟ್ಟಿದ್ದ ತನ್ನ ಸುಂದರವಾದ ರಥದಲ್ಲಿ ವಿಹಾರಾರ್ಥವಾಗಿ ಹೊರಟು, ಸೂರ್ಯಾಸ್ತಮಯಕ್ಕೆ ಅರಮನೆಗೆ ಹಿಂತಿರುಗಿದನು.

ಆ ರಥವನ್ನು ಗಾಡೀಖಾನೆಯಲ್ಲಿ ಬಿಡದೆ ಸೇವಕರು ಅಂಗಳದಲ್ಲೇ ಬಿಟ್ಟುಬಿಟ್ಟಿದ್ದರು. ಅಂದು ರಾತ್ರಿ ಭಾರಿ ಮಳೆ ಸುರಿಯಿತು. ರಥ ಪೂರ್ತಿ ನೆಂದು ಒದ್ದೆಯಾಯಿತು. ಅರಮನೆಯ ನಾಯಿಗಳು ಕೆಳಗಿಳಿದು ಬಂದು ರಥಕ್ಕೆ ಹಾಕಿದ್ದ ಚರ್ಮದ ಸಾಮಾನುಗಳಲ್ಲಿ ಕೆಲವನ್ನು ತಿಂದು ಕೆಲವನ್ನು ಕಡಿದು ಚೆಲ್ಲಾಡಿದವು.

ಮಾರನೆಯದಿನ ಪರಿಚಾರಕರು ರಾಜನ ಹತ್ತಿರಕ್ಕೆ ಹೋಗಿ "ಪ್ರಭೂ, ನಾಯಿಗಳು ಬಂದು ತಮ್ಮ ರಥದ ಸಾಮಗ್ರಿಗಳನ್ನೆಲ್ಲಾ ಕಡಿದು ಹಾಕಿದವು" ಎಂದು ದೂರು ಮಾಡಿದರು.

ಈ ಮಾತು ಕೇಳಿ ರಾಜನಿಗೆ ನಾಯಿಗಳ ಮೇಲೆ ಕಡು ಕೋಪವುಂಟಾಯಿತು. "ಹಾಳು ನಾಯಿಗಳು. ಕಣ್ಣಿಗೆ ಬಿದ್ದ ನಾಯಿಗಳನ್ನು ಕೊಂದುಬಿಡಿ" ಎಂದು ಆಜ್ಞೆಮಾಡಿದ.

ರಾಜಾಜ್ಞೆಯಾದ ಕೂಡಲೇ ರಾಜ್ಯದಲ್ಲಿ ನಾಯಿಗಳ ವಧೆ ಪ್ರಾರಂಭವಾಯಿತು. ಅಂದಿನಿಂದ ರಾಜಭಟರು ಕಣ್ಣಿಗೆ ಕಾಣಿಸಿದ ನಾಯಿಯನ್ನೆಲ್ಲಾ ಕೊಲ್ಲುತ್ತಿದ್ದರು. ಈ ಅವಾಂತರ ಮಿತಿಮೀರಲು ರಾಜ್ಯದಲ್ಲಿದ್ದ ನಾಯಿಗಳೆಲ್ಲವೂ ಒಟ್ಟಾಗಿ ಸೇರಿ ಬೋಧಿಸತ್ವನಿದ್ದ ಸ್ಮಶಾನಕ್ಕೆ ಹೋದವು.

"ಏನು? ಏನು ಸಮಾಚಾರ? ನೀವೆಲ್ಲರೂ ಇಲ್ಲಿಗೇಕೆ ಓಡಿಬಂದಿರಿ?" ಎಂದು ದುಗುಡದಿಂದ ಕೇಳಿದ ಬೋಧಿಸತ್ವ.

"ಹಿರಿಯರೇ, ಇನ್ನೇನಿದೆ? ನಮ್ಮ ಜಾತಿಯನ್ನು ನಾಶಮಾಡುವ ಹತ್ಯಾಕಾಂಡ ನಡೆಯುತ್ತಿದೆ. ರಾಜನ ರಥದಲ್ಲಿದ್ದ ಚರ್ಮದ

ಎಚ್. ನಾರಾಯಣರಾವ್






ಸಾಮಾನುಗಳನ್ನೆಲ್ಲಾ ಯಾವುದೋ ನಾಯಿಗಳು ಕಡಿದುಹಾಕಿದವಂತೆ. ಈ ಮಾತು ಕೇಳಿ ರಾಜನು ಉರಿದೆದ್ದು ನಾಯಿಗಳೇ ಕಣ್ಣಿಗೆ ಬೀಳದಂತೆ ನಿರ್ಮೂಲ ಮಾಡಲು ಆಜ್ಞಾಪಿಸಿದ್ದಾನಂತೆ" ಎಂದು ಹೇಳಿದವು.

ಆಗ ಬೋಧಿಸತ್ವನು ಹೀಗೆ ಯೋಚಿಸಿದ: ಹೊರಗಿರುವ ನಾಯಿಗಳು ಅರಮನೆಯೊಳಗೆ ಹೋಗಲು ಎಷ್ಟುಮಾತ್ರವು ಸಾಧ್ಯವಿಲ್ಲ. ಏಕೆಂದರೆ ರಾತ್ರಿ ಹಗಲು ಭಟರು ಕಾವಲು ಕಾಯುತ್ತಿರುತ್ತಾರೆ. ಆದುದರಿಂದ ಇದು ಅರಮನೆಯ ನಾಯಿಗಳು ಮಾಡಿದ ಕಾರ್ಯವೇ ಆಗಿರಬೇಕು. ಅಷ್ಟೇ ಅಲ್ಲ. ತಪ್ಪುಮಾಡಿದ ನಾಯಿಗಳು ಸುಖವಾಗಿವೆ. ಯಾವ ಪಾಪವನ್ನೂ ಅರಿಯದ ನನ್ನ ನಾಯಿಗಳು ನಿಷ್ಕಾರಣವಾಗಿ ಸಾವಿಗೆ ಗುರಿಯಾಗುತ್ತಿವೆ. ಹೀಗೇ ಆದರೆಂತು? ತಪ್ಪು ಮಾಡಿದ ನಾಯಿಗಳನ್ನು ಕಂಡುಹಿಡಿದು ರಾಜನಿಗೆ ತೋರಿಸಿ, ನನ್ನ ನಾಯಿಗಳನ್ನು ರಕ್ಷಿಸುವುದು ನನ್ನ ಕರ್ತವ್ಯ. ಎಂದುಕೊಂಡು ಬೋಧಿಸತ್ವನು ತನ್ನ ನಾಯಿಗಳಿಗೆ "ನೀವು ಹೆದರಬೇಡಿ. ನಿಮ್ಮನ್ನು ಕಾಪಾಡುವ ಭಾರ ನನ್ನದು. ನಾನು ರಾಜನ ಹತ್ತಿರ ಹೋಗಿ ಬರುವೆನು. ನಾನು ಬರುವವರೆವಿಗೂ ನೀವಿಲ್ಲೇ ಇರಿ" ಎಂದು ಹೇಳಿ ಸಮಾಧಾನ ಮಾಡಿದ.

ಹಾಗೆ ಸಮಾಧಾನಮಾಡಿ ಬೋಧಿಸತ್ವನು ತನ್ನ ಮನಸ್ಸಿನಲ್ಲಿ "ಧರ್ಮ ಜಯಿಸಲಿ," "ರಾಜನು ನ್ಯಾಯವನ್ನು ಪಾಲಿಸಲಿ" ಎಂದುಕೊಂಡು ರಾಜನ ಅರಮನೆಯಕಡೆಗೆಹೊರಟ. ಆ ನಾಯಿ ಅರಮನೆಕಡೆ ಹೋಗುತ್ತಿರಲು ರಾಜಭಟರ್‍ಯಾರೂ ಅದರಮೇಲೆ ಒಂದು ಕಲ್ಲಾದರೂ ಎಸೆಯಲಿಲ್ಲ. ಗದರಿಸಲೂ ಇಲ್ಲ.

ಕಣ್ಣಿಗೆ ಕಾಣಿಸಿದ ನಾಯಿಗಳನ್ನು ಕೊಲ್ಲುವಂತೆ ಆಜ್ಞೆಮಾಡಿದಮೇಲೆ ರಾಜನು ನ್ಯಾಯಸ್ಥಾನಕ್ಕೆ ಬಂದು ಆಸೀನರೂಢನಾಗಿದ್ದನು. ಬೋಧಿಸತ್ವನೆಂಬ ಶುನಕ ಸಿಂಹಾಸನದ ಕೆಳಗಿಂದ ಹೊರಬಂದು ರಾಜನ ಎದುರಾಗಿ ನಿಂತುಕೊಂಡಿತು. ರಾಜಸೇವಕರು ಆ ನಾಯಿಯನ್ನು ಹಿಡಿಯಲು ಹೋದರು. ಆದರೆ ರಾಜನು ಅವರನ್ನು ತಡೆದನು.

ಬೋಧಿಸತ್ವನು ರಾಜನಿಗೆ ವಿನಯಪೂರ್ವಕವಾಗಿ ನಮಸ್ಕಾರಮಾಡಿ "ಪ್ರಭೂ.



ನಾಯಿಗಳೆಲ್ಲವನ್ನೂ ಕೊಲ್ಲುವಂತೆ ಆಜ್ಞೆಮಾಡಿದಿರಾ?" ಎಂದು ಕೇಳಿದ.

"ಹೌದು" ಎಂದ ರಾಜ.

"ಅವು ಮಾಡಿದ ತಪ್ಪೇನು? ಮಹಾ ಪ್ರಭೂ" ಎಂದು ಮತ್ತೆ ಕೇಳಿದ.

"ನಮ್ಮ ರಥದ ಸಾಮಾನುಗಳೆಲ್ಲವನ್ನೂ ಕಡಿದು ಚಿಲ್ಲಾಪಿಲ್ಲಿಮಾಡಿವೆ" ಎಂದ ರಾಜ.

"ಸರಿ, ಹಾಗೆ ಮಾಡಿದ ನಾಯಿಗಳು ಯಾವುವೋ ನಿಮಗೆ ತಿಳಿದಿದೆಯೇ?" ಪ್ರಶ್ನೆ ಮಾಡಿದ ಬೋಧಿಸತ್ವ.

"ಇಲ್ಲ"

"ಹಾಗಾದರೆ ತಪ್ಪುಮಾಡಿದ ನಾಯಿಗಳು ಯಾವುವೋ ತಿಳಿದುಕೊಳ್ಳದೆ, ಕಣ್ಣಿಗೆ ಕಾಣಿಸಿದ ನಾಯಿಯನ್ನು ಕೊಲ್ಲುವುದು ನ್ಯಾಯವೇ? ನಿರಪರಾಧಿಗಳನ್ನು ವಿನಾ ಕಾರಣವಾಗಿ ಸಾಯಿಸುವುದು ಧರ್ಮವೇ?" ಎಂದು ಕೇಳಿದ ಬೋಧಿಸತ್ವ.

"ನಮ್ಮ ರಥದ ಸಾಮಗ್ರಿಗಳನ್ನು ಹಾಳು ಮಾಡಿದ ಕಾರಣ ನಾಯಿಜಾತಿಯನ್ನು ನಾಶ ಪಡಿಸುವಂತೆ ಹೇಳಿದೆ"

"ಹಾಗಾದರೆ ನಿಮ್ಮ ಪರಿಚಾರಿಕರು ಎಲ್ಲ ಶುನಕಗಳನ್ನೂ ಸಾಯಿಸುವರೋ ಇಲ್ಲ ಕೆಲವಕ್ಕೆ ಮಾತ್ರ ವಿನಾಯಿತಿ ತೋರಿಸುವರೊ?" ಮತ್ತೆ ಪ್ರಶ್ನೆಮಾಡಿದ ಬೋಧಿಸತ್ವ.

"ಎಲ್ಲವನ್ನೂ ಸಾಯಿಸುವುದಿಲ್ಲ. ನಮ್ಮ ಅರಮನೆಯ ಉತ್ತಮಜಾತಿ ನಾಯಿಗಳನ್ನು ಮುಟ್ಟುವುದಿಲ್ಲ" ಎಂದ ರಾಜ.

"ಪ್ರಭೂ, ಈಗತಾನೇ ತಾವು 'ನಮ್ಮ ರಥದ ಸಾಮಗ್ರಿಗಳನ್ನು ಹಾಳುಮಾಡಿದ ಕಾರಣ ನಾಯಿಜಾತಿಯನ್ನು ನಾಶಪಡಿಸುವಂತೆ ಹೇಳಿದೆ' ಎಂದು ಹೇಳಿದಿರಿ. ಮತ್ತೆ ನೀವೇ ಅರಮನೆಯಲ್ಲಿರುವ ನಾಯಿಗಳಿಗೆ ವಿನಾಯಿತಿ ಎಂದು ಹೇಳುತ್ತಿರುವಿರಿ. ಇದರಿಂದ ಪ್ರಭುಗಳಿಗೆ ಪಕ್ಷಪಾತ, ದ್ವೇಷ, ಅವಿವೇಕ, ಭಯವೆಂಬ ನಾಲ್ಕು ದುರ್ಗುಣಗಳಿವೆ ಎಂದು ತಿಳಿಯಬರುತ್ತದೆ. ಇದು ರಾಜಧರ್ಮವಲ್ಲ. ನ್ಯಾಯವಿಚಾರಣೆ ಮಾಡುವಾತ ನಿಷ್ಪಕ್ಷಪಾತವಾಗಿರಬೇಕು. ಆದರೆ ಈಗಿನ ನಮ್ಮ ಆಜ್ಞೆಯಿಂದ ಅರಮನೆಯ ನಾಯಿಗಳುಮಾತ್ರ ಸುರಕ್ಷಿತವಾಗಿರುತ್ತವೆ; ಯಾವ ಪಾಪವೂ ಅರಿಯದ ಇತರನಾಯಿಗಳುಬಲಿಯಾಗುತ್ತವೆ.




ನೀವು ನ್ಯಾಯವನ್ನು ಕಾಪಾಡುತ್ತಿಲ್ಲವೆಂದು ಹೇಳಬಯಸುವೆನು" ಎಂದು ಹೇಳುತ್ತಿರಲು ಈ ರೀತಿ ಅಶರೀರವಾಣಿ ನುಡಿಯಿತು:

ಅರಮನೆ ನಾಯಿಗಳು ಹೊಟ್ಟೆಗಿಲ್ಲದೆ
ಕಳವಳಪಡುತಿವೆ!
ದೋಷವರಿಯದ ಊರನಾಯಿಗಳು
ಬಲಿಯಾಗುತಿವೆ!
ರಾಜನೇ ಇದೇಯೋ ನಿನ್ನ ನ್ಯಾಯ?
ಪ್ರಭುವೇ ಇದೇಯೋ ನಿನ್ನ ಧರ್ಮ?

ಈ ಮಾತುಗಳನ್ನು ಕೇಳಿ ರಾಜನು ಬೆಚ್ಚಿಬಿದ್ದ. ಆತನಲ್ಲಿ ಭಾರಿ ಬದಲಾವಣೆ ಆಯಿತು. "ಹಾಗಾದರೆ ನಮ್ಮ ರಥದ ಸಾಮಾನುಗಳನ್ನು ಹಾಳುಮಾಡಿದ ನಾಯಿಗಳು ಯಾವುವೋ ತಿಳಿಸುವಿಯಾ" ಎಂದು ಕೇಳಿದ ರಾಜ.

ಅದಕ್ಕೆ ಬೋಧಿಸತ್ವನು "ಓ, ಅಗತ್ಯವಾಗಿ; ಅರಮನೆಯ ನಾಯಿಗಳೇ ಈ ಕೆಲಸ ಮಾಡಿದವು" ಎಂದ.

"ಅದೆಂತಹ ಮಾತು" ರಾಜ ಬೇಸರಿಕೆಯಿಂದ ನುಡಿದ.

"ಬೇಕಾದರೆ ರುಜುವಾತು ಮಾಡಬಲ್ಲೆ" ಬೋಧಿಸತ್ವನೆಂದ.

"ಮಾಡು ನೋಡೋಣ" ಎಂದ ರಾಜ.

ಸ್ವಲ್ಪ ಮಜ್ಜಿಗೆ, ಹುಲ್ಲು ತರಿಸಿ, ಅರಮನೆ ನಾಯಿಗಳನ್ನು ಬರಮಾಡುವಂತೆ ಕೇಳಿದ ಬೋಧಿಸತ್ವ. ರಾಜನ ಸಲಹೆಯಂತೆ ಮಜ್ಜಿಗೆಯಲ್ಲಿ ಹುಲ್ಲನ್ನು ಬೆರಸಿ ಆ ನಾಯಿಗಳಿಗೆ ಕುಡಿಸಿದರು. ಕೂಡಲೇ ಅವು ವಾಂತಿಮಾಡಿಕೊಳ್ಳಲು ಪ್ರಾರಂಭಿಸಿದವು. ಅವು ನುಂಗಿದ ತೊಗಲಿನ ಚೂರುಗಳೆಲ್ಲವೂ ಆ ವಾಕರಿಕೆಯಲ್ಲಿ ಹೊರಬಿದ್ದವು.

"ರಾಜನೇ ಈಗಲಾದರೂ ತಿಳಿಯಿತೇ? ನಿನ್ನ ಸೇವಕರು ಈ ನಾಯಿಗಳಿಗೆ ಆಹಾರ ಸರಿಯಾಗಿ ಕೊಡದಿದ್ದುದರಿಂದ ಅವು ಹಸಿವಿನ ಬಾಧೆ ತಾಳಲಾರದೆ ಈ ಚರ್ಮವನ್ನು ಕಡಿದು ತಿನ್ನಬೇಕಾಯಿತು" ಎಂದ ಬೋಧಿಸತ್ವ.

ರಾಜ ಪರಮಾನಂದ ಭರಿತನಾದ. ಈತನು ಶುನಕ ರೂಪದಲ್ಲಿರುವ ಬೋಧಿಸತ್ವನೇ ಎಂದು ಅವನ ಅಂತರಂಗಕ್ಕೆ ತಿಳಿಯಿತು.

ಕೂಡಲೇ ಆತನು ಸಿಂಹಾಸನದಿಂದಿಳಿದು ಶುನಕರೂಪದ ಬೋಧಿಸತ್ವನನ್ನು ಕುರಿತು—

'ಪ್ರಭು, ನನ್ನದು ನಿಜವಾಗಿಯೂ ಮಹಾಪರಾಧ. ನೀವು ತಕ್ಕ ಸಮಯದಲ್ಲಿ ಬಂದು ನನ್ನ ಕಣ್ಣಿಗೆ ಅಂಜನವನ್ನು ಹಚ್ಚಿದಿರಿ. ಇಲ್ಲದಿದ್ದರೆ ನನ್ನಿಂದ ಇನ್ನೂ ಎಷ್ಟೋ ಅನ್ಯಾಯಗಳು ನಡೆಯುತ್ತಿದ್ದವು. ಇದುವರೆಗಿನ ನನ್ನ ಸರ್ವಾಪರಾಧಗಳನ್ನು ಮನ್ನಿಸಬೇಕು. ಮತ್ತು ನನಗೆ ತಕ್ಕ ಹಿತಬೋಧೆಮಾಡಬೇಕು" ಎಂದು ಪ್ರಾರ್ಥಿಸಿಕೊಂಡನು.

ಇಷ್ಟೇ ಅಲ್ಲ ಆ ಬೋಧಿಸತ್ವ ಶುನಕವನ್ನು, ರಾಜಸಭೆಯಲ್ಲಿ ದಿವ್ಯಾಸನದಮೇಲೆ ಕುಳ್ಳಿರಿಸಿದನು. ವಂದಿಮಾಗಧರುಗಳಿಂದ ಅದರ ಗುಣಕಥನಮಾಡಿಸಿದನು. ದೊಡ್ಡ ದೊಡ್ಡ ಸಭಾಸದರುಗಳೆಲ್ಲಾ ಅದರ ಮುಂದೆ ನಮಸ್ಕಾರ ಮಾಡಿ ಗೌರವಿಸಿದರು. ಛತ್ರಚಾಮರವೊದಲಾದ ಸಮಸ್ತ ರಾಜಮರ್ಯಾದೆಗಳೂ ಅದಕ್ಕೆ ನಡೆಯಿತು.

ಇದರ ಜ್ಞಾಪಕಾರ್ಥವಾಗಿ ರಾಜನು, ವರ್ಷವರ್ಷವೂ ಆದಿನ ನಾಯಿಗಳ ಆರಾಧನೆ ಮಾಡಿಸುವುದಾಗಿ ತೀರ್ಮಾನಿಸಿದನು.

ಆಗ ಬೋಧಿಸತ್ವ "ರಾಜನೇ ನ್ಯಾಯ ಪರಿಪಾಲನೆ ಮಾಡುವುದೇ ರಾಜಲಕ್ಷಣ" ಎಂದು ಹೇಳಿ ಅನೇಕ ರಾಜಧರ್ಮಗಳನ್ನು ಉಪದೇಶ ಮಾಡಿದ.

ಆ ಉಪದೇಶವನ್ನು ಕೇಳಿದ ತರುವಾಯ ರಾಜನು ಪ್ರತಿ ಜೀವಿಯನ್ನೂ ದಯೆಯಿಂದ ನೋಡುವಂತೆ ತನ್ನ ಪರಿವಾರಕ್ಕೆ ಹೇಳಿದ.

ಅಂದಿನಿಂದ ಅರಮನೆಯಲ್ಲಿರುವ ನಾಯಿಗಳಿಗೆ ಮಾತ್ರವಲ್ಲ, ಊರಿನಲ್ಲಿರುವ ಸಮಸ್ತ ನಾಯಿವೃಂದಕ್ಕೂ ಮೂರು ಹೊತ್ತೂ ಆಹಾರ ಹಾಕಬೇಕೆಂದು ರಾಜನು ಆಜ್ಞೆಮಾಡಿದ.

ಆಗಿಂದಾಗ್ಗೆ ಬೋಧಿಸತ್ವನ ಸಲಹೆಗಳನ್ನು ಪಡೆದು ರಾಜನು ಅನೇಕ ಉತ್ತಮ ಕಾರ್ಯಗಳನ್ನುಮಾಡಿ, ಮುಕ್ತಿ ಪಡೆದನು.

ಈ ರೀತಿ ಶುನಕರೂಪದಲ್ಲಿ ಬೋಧಿಸತ್ವನು ಹತ್ತುಸಾವಿರ ವರ್ಷಗಳ ಕಾಲ ಪ್ರಪಂಚಕ್ಕೆ ಉಪದೇಶಮಾಡಿ, ಅನೇಕರಿಗೆ ಮುಕ್ತಿಮಾರ್ಗವನ್ನು ತೋರಿಸಿದನು. ಅಂತೆಯೇ ಬುದ್ಧನು ಎಂದೆಂದೂ ಅಮರನಾಗಿದ್ದಾನೆ.






[ ಪತ್ರದೊಂದಿಗೆ ಭೀಮವರ್ಮನ ಹತ್ತಿರ ಹೋಗಿದ್ದ ವಿಜಯವರ್ಮ ಹಿಂತಿರುಗಿ ಬರುತ್ತಾ ದಾರಿಯಲ್ಲಿ ಪುರುಷ ರೂಪದಲ್ಲಿ ಓಡಿಹೋಗುತ್ತಿದ್ದ ಕರುಣಳನ್ನು ಸೇರಿಕೊಂಡ. ಯುದ್ಧದಲ್ಲಿ ಭೀಮವರ್ಮನ ಪಕ್ಷ ಸೋತುಹೋಯಿತು. ಭೀಮವರ್ಮ ಮಾರುವೇಷದಲ್ಲಿ ಪ್ರಾಣ ಉಳಿಸಿಕೊಂಡು ಓಡಿಹೋದ. ಅಲ್ಲಿ ಶತ್ರುಗಳು ಹೆಚ್ಚಿಕೊಂಡರು. ಭೀಮವರ್ಮನ ಆಜ್ಞೆಯ ಪ್ರಕಾರ ಕರುಣಳನ್ನು ಗಿರಿಕೋಟೆಗೆ ಸೇರಿಸುವನು ವಿಜಯವರ್ಮ ]

ಗಿರಿಕೋಟೆಗೆ ಹಿಂತಿರುಗಿದ ವಿಜಯವರ್ಮನಿಗೆ ಅಲ್ಲಿನ ಜನರೆಲ್ಲಾ ತುಂಬಾ ನಿಸ್ಪೃಹತೆಯಿಂದಿರುವಂತೆ ತೋರಿ ಬಂದರು. ಯುದ್ಧದಲ್ಲಿ ಅಪಜಯ, ಶಬ್ದವೇಧಿಯ ಕಿರುಕುಳ, ಅವರನ್ನು ಬಾಡಿಸಿದ್ದವು. ಕೋಟೆಯಲ್ಲಿ ಪ್ರವೇಶಿಸಿದ ಕರುಣಾಕರ ಮತ್ತೆ ಕಾಣಿಸಲಿಲ್ಲ. ತನ್ನ ತಂದೆಯ ಸಾವನ್ನು ಕುರಿತು ಆತನು ಹೇಳಿದ ಮಾತುಗಳು ವಿಜಯನ ಮನಸ್ಸಿನಲ್ಲಿ ಮರು ಕಳಿಸುತ್ತಿತ್ತು.

ಏನೂ ತೋರದೆ ಆತನು ರಾಮಸಿಂಗನನ್ನು ಕೇಳಿದ. ರಾಮಸಿಂಗನು ಒಂದು ಕ್ಷಣ ಅವನ ಕಡೆ ತೀವ್ರದೃಷ್ಟಿಯಿಂದ ನೋಡಿ " ನನಗೆ ಏನೂ ತಿಳಿಯದು. ನೀನು ಇಂತಹ ವಿಷಯಗಳನ್ನು ತಲೆಗೆ ಹಚ್ಚಿಕೊಳ್ಳಬೇಡ. ಇಲ್ಲ, ನಿನಗೆ ಅಷ್ಟು ಕುತೂಹಲವಿದ್ದರೆ ಸೋಮಶರ್ಮರನ್ನು ಕೇಳು" ಎಂದ. ಮರು ಮಾತನಾಡದೆ ವಿಜಯವರ್ಮ ಅಲ್ಲಿಂದ ಹೊರಟುಬಿಟ್ಟ.

ಭೀಮವರ್ಮ ತನ್ನ ಸೈನಿಕರಿಗೆ ಧೈರ್ಯ ಹೇಳಿ ಬೀಸಲಪ್ಪೂರು ಸಾಮಂತರಲ್ಲಿ ಒಬ್ಬನಾದ ದೇವದುರ್ಗಾಧಿಪತಿಗೆ ಒಂದು ಪತ್ರ ಕಳುಹಿಸಿದ. ಆತನು ಈ ರೀತಿ ಬಣ್ಣ ಬದಲಾಯಿಸಿದುದು ಯಾರಿಗೂ ಅಚ್ಚರಿಯನ್ನುಂಟು ಮಾಡಲಿಲ್ಲ. ಅದು ಆತನ ಅಭ್ಯಾಸ.



ವಿಜಯವರ್ಮ ನೆಟ್ಟಗೆ ಸೋಮಶರ್ಮನ ಹತ್ತಿರ ಹೋಗಿ ರಾಮಸಿಂಗನಿಗೆ ಹಾಕಿದ ಪ್ರಶ್ನೆಯನ್ನೇ ಮತ್ತೆ ಹಾಕಿದ. ಸೋಮಶರ್ಮ "ಹಿಂದೊಂದುಸಾರಿ ನಿನಗೆ ಹೇಳಲಿಲ್ಲವೆ?" ಎಂದು ಹೇಳಿ ಅಲ್ಲಿಂದ ನಡೆದುಬಿಟ್ಟ. ವಿಜಯವರ್ಮನಿಗೆ ಸಂತೃಪ್ತಿಯಾಗಲಿಲ್ಲ. ಮತ್ತೆ ಯಾರನ್ನು ಕೇಳಲಿ ಎಂದು ಯೋಚಿಸುತ್ತಿರುವಲ್ಲಿ ಸೇವಕನೊಬ್ಬನು ಬಂದು "ಭೀಮವರ್ಮರು ಕರೆಯುತ್ತಿದ್ದಾರೆ" ಎಂದ.

ವಿಜಯನು ಹೋಗುವ ವೇಳೆಗೆ ಭೀಮವರ್ಮನು ತನ್ನ ಕೊಠಡಿಯಲ್ಲಿ ಕೋಪದಿಂದ ಕುದಿಯುತ್ತಿದ್ದಾನೆ. ಪಕ್ಕದಲ್ಲಿ ಸೋಮಶರ್ಮನನ್ನು ಹೊರತು ಬೇರೆ ಯಾರೂ ಇರಲಿಲ್ಲ. ಕೂಡಲೇ ತನಗೆ ಏಕೆ ಕರೆಬಂತೋ ವಿಜಯವರ್ಮ ಗ್ರಹಿಸಿಬಿಟ್ಟ. "ನನ್ನನ್ನು ಕರೆ ಕಳುಹಿಸಿದಿರಾ?" ಎಂದು ಮೆಲ್ಲನೆ ಕೇಳಿದ. 'ಹೌದು. ಕಂಡಕಂಡವರಿಗೆ ನೀನು ಏನೇನೋ ಪ್ರಶ್ನೆಗಳನ್ನು ಹಾಕುತ್ತಿರುವೆಯಂತೆ! ನಿನ್ನನ್ನು ಹೆತ್ತ ಮಗನಂತೆ ಸಲಹಿ ದೊಡ್ಡವನನ್ನಾಗಿ ಮಾಡಿದುದಕ್ಕೆ ಇದೇಯೋ ಪ್ರತಿಫಲ. ನಿನಗೇನು ಕಡಿಮೆ ಮಾಡಿದ್ದೇನೆ?" ಎಂದು ಒದರಿದ ಭೀಮವರ್ಮ.

"ಅಂತಹ ಕೃತಘ್ನ ನಾನಲ್ಲ. ಆದರೆ ನನ್ನ ತಂದೆಯ ಸಾವಿನ ವಿಷಯವಾಗಿ ವಿವಿಧ ವರ್ತಮಾನಗಳು ಕೇಳಿ ಬರುತ್ತಿವೆ. ಸತ್ಯ ತಿಳಿಯುವವರೆಗೆ ನನಗೆ ಸಮಾಧಾನವಾಗುವಂತಿಲ್ಲ" ಎಂದ ವಿಜಯವರ್ಮ.

"ಹಾಗಾದರೆ ಕೇಳು. ಭಗವಂತನ ಸಾಕ್ಷಿಯಾಗಿ ಹೇಳುತ್ತಿರುವೆನು—ನಿನ್ನ ತಂದೆಯ ಸಾವಿಂದ ನನಗೆ ಯಾವ ವಿಧವಾದ ಸಂಬಂಧವೂ ಇಲ್ಲ. ಇನ್ನು ಅನುಮಾನ ಬಿಡು. ಇಲ್ಲ, ಕೂಡಲೇ ಕೋಟೆಯ ಹೊರಗೆ ಅರಣ್ಯದಲ್ಲಿ ನನ್ನ ಶತ್ರುಗಳೆಷ್ಟೋ ಜನರಿದ್ದಾರೆ. ನೀನೂ ಅವರೊಂದಿಗೆ ಸೇರಿಬಿಡು" ಎಂದು ಭೀಮವರ್ಮ ಆಣೆ ಇಟ್ಟ. ವಿಜಯನಿಗೆ ಒಂದು ರೀತಿ ಸಮಾಧಾನವಾಯಿತು. ಆತನು ಸಂತೋಷದಿಂದ ಸೋಮಶರ್ಮನ ಕಡೆ ತಿರುಗಿ ನೋಡಿದ. ಆದರೆ ಸೋಮಶರ್ಮನ ಮುಖ ನೋಡಿ ಆತನಿಗೆ ಆಶ್ಚರ್ಯವಾಯಿತು. ಆತನ ಮುಖ ಬಿಳಿಚಿಕೊಂಡಿತ್ತು! ಭಯದಿಂದ ಥರಥರ ನಡುಗುತ್ತಿದ್ದಾನೆ!! ವಿಜಯವರ್ಮ

ಅನುಮಾನದಿಂದ "ಸೋಮಶರ್ಮರೂ ಆಣೆಮಾಡಿ ಹೇಳಲಿ" ಎಂದ.

"ಓ, ತಪ್ಪುಮಾಡದವನಿಗೆ ಏನು ಭಯ? 'ಆಣೆಯಿಡಯ್ಯ' ಎಂದು ಭೀಮವರ್ಮ ಸೋಮಶರ್ಮನನ್ನು ಪುಸಲಾಯಿಸಿದ. ಆದರೆ ಸೋಮಶರ್ಮನ ಬಾಯಿಂದ ಮಾತೇ ಹೊರಡದಾಯಿತು. ಭೀತಿಯಿಂದ ಭೀಮವರ್ಮನನ್ನೇ ಎವೆಯಿಕ್ಕದೆ ನೋಡುತ್ತಿದ್ದಾನೆ!

ಇಷ್ಟರಲ್ಲಿ ಆ ಕೊಣೆಯ ಕಿಟಕಿಯ ಮುಖಾಂತರ ಒಂದು ಬಾಣ ಸರ್ರನೆ ಬಂದು, ಆ ಮೂವರಿಗೆ ಎದುರಾಗಿದ್ದ ಗೋಡೆಗೆ ತಗುಲಿತು. ಅದು ಶಬ್ದವೇಧಿ ಬಾಣವೆಂದು ಕೂಡಲೇ ಅವರು ಗ್ರಹಿಸಿದರು. ಸೋಮಶರ್ಮ ಕಿಟಾರನೆ ಕಿರಿಚಿ ಹಿಂದಕ್ಕೆ ಬಿದ್ದುಬಿಟ್ಟ. ಭೀಮ ಮತ್ತು ವಿಜಯವರ್ಮರು ಕಿಟಕಿಯ ಹತ್ತಿರ ಓಡಿ ಇಣಕಿ ನೋಡಿದರು. ಏನೂ ಕಾಣಿಸಲಿಲ್ಲ. ದೂರದಲ್ಲಿ ಮರಗಳಮೇಲೆ ಪಕ್ಷಿಗಳು ತಾವೇತಾವಾಗಿ ಹಾರಾಡುತ್ತಿವೆ.

ದ್ವಾರಪಾಲಕನು ಯಥಾವಿಧಿಯಾಗಿ ಕಾವಲುಕಾಯುತ್ತಲೇ ಇದ್ದ. "ಸರಿ, ವಿಜಯ ಇನ್ನು ನೀನು ಹೋಗಬಹುದು. ಸೋಮಶರ್ಮ ಆಣೆಯಿಡದೆ ಎಲ್ಲಿಗೆ ಹೋಗುತ್ತಾನೆ. ನೀನು ತುಸ ಹುಷಾರಾಗಿರುವುದು ಉತ್ತಮ" ಎಂದು ಭೀಮವರ್ಮನು ವಿಜಯವರ್ಮನಿಗೆ ಹೇಳಿ ಆತನನ್ನು ಕಳುಹಿಸಿಬಿಟ್ಟ.

ಆಗಲೇ ಚೇತರಿಸಿಕೊಳ್ಳುತ್ತಿದ್ದ ಸೋಮಶರ್ಮನ ಕಡೆ ತಿರುಗಿ "ನಿನ್ನ ಚರ್ಯೆಯಿಂದ




ಅವನಿಗೆ ಮತ್ತೆ ಅನುಮಾನ ಬಂತು. ಇಂದು ರಾತ್ರಿ ನೀನೂ ಸಹ ಆಣೆ ಇಟ್ಟರೆ ಆತನ ಪ್ರಾಣವನ್ನು ರಕ್ಷಿಸಿದವನಾಗುವೆ. ಇಲ್ಲದಿದ್ದರೆ ಆತನೂ ಸಹ ತನ್ನ ತಂದೆಯ ದಾರಿಯನ್ನೇ ಹಿಡಿಯಬೇಕಾಗುವುದು. ಸರಿ, ಕೂಡಲೇ ಆತನನ್ನು ಬಲಗಡೆ ಕೋಣೆಗೆ ಬದಲಾಯಿಸು"

"ಏನು? ಬಲಗಡೆ ಕೋಣೆಗೇ?" ಎಂದ ಸೋಮಶರ್ಮ ಕಂಪಿಸುವ ಕಂಠದಿಂದ. "ಹೌದು, ಆತನ ಸಾವುಬದುಕು ನಿನ್ನ ಕೈಯಲ್ಲಿದೆ. ಆಣೆಯಿಟ್ಟು ಹೇಗೋ ಸಮಾಧಾನ ಮಾಡಿದೆಯಾದರೆ ಆತ ಉಳಿಯುತ್ತಾನೆ; ಇಲ್ಲ, ತಂದೆಯಂತೆ ಮಗನನ್ನೂ ಕೊಂದಪಾಪ ನಿನ್ನ ತಲೆಗೆ ಸುತ್ತಿಕೊಳ್ಳುತ್ತದೆ. ಏನು ಹೇಳುವೆ?" ಎಂದ ಭೀಮವರ್ಮ. ಕ್ಷಣಮಾತ್ರ



ಆಗ ವಿಜಯವರ್ಮನು "ಸರಿ. ಯಾರಿಗೆ ಸಂಬಂಧವಿತ್ತೋ ನಿಮಗೆ ತಿಳಿದಿದೆಯೇ?" ಎಂದು ಕೇಳಲು, ಸೋಮಶರ್ಮನು ಬೆದರಿ "ಇಲ್ಲ, ಇಲ್ಲ, ನನಗೇನೂ ತಿಳಿಯದು" ಎಂದು ಹೊರಟುಹೋದ.

ನಿರ್ದೋಷಿಯೆಂದು ಆಣೆಯಿಟ್ಟು ಸೋಮಶರ್ಮ ಈ ರೀತಿ ತತ್ತರಿಸಿ ಹಠಾತ್ತನೆ ಹೊರಟುಹೋದುದನ್ನು ಕಂಡು ವಿಜಯವರ್ಮನಿಗೆ ಅಚ್ಚರಿಯಾಯಿತು. ನಾಲ್ಕು ಕಡೆಯೂ ಒಂದು ಸಾರಿ ದೃಷ್ಟಿಬೀರಿದ. ಎದುರಾಗಿದ್ದ ಕೋಣೆಯ ಕಿಟಕಿಯ ಬಾಗಿಲು ತುಸ ಕದಲಿದಂತೆ ಕಾಣಿಸಿತು. ಯಾರದೋ ಕಣ್ಣು ಕ್ಷಣಮಾತ್ರ ತಟಕ್ಕನೆ ಮಿಂಚಿ ಮರೆಯಾಯಿತು.

ಸೋಮಶರ್ಮನು ಸುಮ್ಮನಿದ್ದು "ಆತನ ಪ್ರಾಣ ಉಳಿಸಲು ಸುಳ್ಳಾದರೂ ಆಡುವೆನು" ಎಂದ. 'ಪಕ್ಕದ ಕೋಣೆಯಲ್ಲೇ ನಾನಿರುತ್ತೇನೆ. ಆತನ ಅನುಮಾನ ನಿರ್ಮೂಲ ಮಾಡುವುದು ನಿನ್ನ ಕರ್ತವ್ಯ' ಎಂದು ಭೀಮವರ್ಮ ಅಲ್ಲಿಂದ ಹೊರಟುಹೋದ.

ಮತ್ತೆ ಸ್ವಲ್ಪಹೊತ್ತಿಗೆ ವಿಜಯವರ್ಮ ಆ ಕೋಣೆಗೆ ಬಂದ. ಪಾಪ, ಸೋಮಶರ್ಮನ ಮುಖ ಬಿಳುಪೇರಿದೆ. ತಲೆ ಎತ್ತಿ ನೋಡಿ ವಿಜಯನ ಕೈಹಿಡಿದುಕೊಂಡು ಈ ರೀತಿ ಅಂದ: "ನಾನು ಆಣೆ ಇಟ್ಟರೆ ನಿನಗೆ ಸಮಾಧಾನವಾಗುವುದಲ್ಲವೇ? ಭಗವಂತನ ಸಾಕ್ಷಿಯಾಗಿ ಹೇಳುತ್ತೇನೆ. ನಿನ್ನ ತಂದೆಯ ಸಾವಿಗೂ ನನಗೂ ಯಾವುದೇ ವಿಧವಾದ ಸಂಬಂಧವಿಲ್ಲ"

ನಡೆದ ಸಂಭಾಷಣೆಗಳನ್ನು ಯಾರೋ ಹೊಂಚಿ ಕೇಳಿದರೆಂದು ವಿಜಯವರ್ಮನು ಗ್ರಹಿಸಿದ. ಎಲ್ಲಾ ಒಂದು ಕಪಟ ನಾಟಕವೆಂಬ ವಿಷಯವೂ ಆತನಿಗೆ ತಿಳಿಯಿತು. 'ನಾನು ಜೇಡರ ಬಲೆಯಲ್ಲಿ ಸಿಕ್ಕಿಕೊಂಡಿದ್ದೇನೆ' ಎಂದುಕೊಂಡ. ಕೂಡಲೇ ಆತನಿಗೆ ಕರುಣಾಕರನ ನೆನಪುಬಂತು. 'ಪಾಪ, ಆತನೂ ನನ್ನಿಂದ ಬಲೆಯಲ್ಲಿ ಬಿದ್ದನಲ್ಲಾ' ಎಂದು ಪರಿತಪಿಸಿದ.

ವಿಜಯವರ್ಮನು ಆ ಕೋಣೆಯಿಂದ ಹೊರಗೆ ಬಂದ ಕೂಡಲೇ ದೂತನೊಬ್ಬನು ಬಂದು ಆತನ ಸ್ಥಳವನ್ನು ಬೇರೊಂದೆಡೆಗೆ ಬದಲಾಯಿಸಿದೆ ಎಂದು ಹೇಳಿದ. "ಏಕೆ? ಯಾವಕೋಣೆ?" ಎಂದು ಕೇಳಿದ ವಿಜಯ. "ಬಲಗಡೆ ಕೋಣೆ" ಎಂದು ಉತ್ತರ ಬಂತು.

"ಎಂತಹ ಕೋಣೆಯಪ್ಪಾ ಅದು. ಚೆನ್ನಾಗಿದೆಯೇನು?" ಎಂದು ವಿಚಾರಿಸಿದ ವಿಜಯ. "ಕೊಠಡಿಗೇನು? ಭೇಷಾಗಿದೆ. ದೆವ್ವಗಳಿವೆ ಅಂತ ಅಂತಾರೆ ಅಷ್ಟೆ" ಎಂದ ಆ ದೂತ. ಸಂಶಯಗ್ರಸ್ತನಾಗಿ ವಿಜಯವರ್ಮ ತನ್ನ ಹೊಸ ನಿವಾಸದಕಡೆ ಹೊರಟ.

ಆ ಕೋಣೆ ವಿಶಾಲವಾಗಿತ್ತಾದರೂ ಕತ್ತಲೆ. ಅದರಲ್ಲಿ ರಾಜ ಮಹಾರಾಜರು ಪವಡಿಸುವಂತಹ ಮಂಚವೊಂದಿತ್ತು. ಹಿಂದೆ ಯಾರೋ ಗಣ್ಯಮನುಷ್ಯರು ಇದ್ದ ಕೋಣೆ. ಇದೆಲ್ಲವನ್ನೂ ಕಂಡು ವಿಜಯವರ್ಮನಿಗೆ ಅನುಮಾನ ಮತ್ತಷ್ಟು ಹೆಚ್ಚಾಯಿತು. ಆತ ಗೋಡೆಗಳನ್ನೂ, ಅಲಮಾರುಗಳನ್ನೂ ತಟ್ಟಿ ತಟ್ಟಿ ಪರೀಕ್ಷಿಸಿದ. ಆದರೆ ಯಾವ ವಿಶೇಷವೂ ಕಾಣಬರಲಿಲ್ಲ. ಗುಪ್ತದ್ವಾರ ಎಲ್ಲೋ ಒಂದು ಕಡೆ ಇರಲೇಬೇಕು ಎಂದು ತೋರಿತು. ಇಂತಹ ಜಾಗದಲ್ಲಿ ಕ್ಷಣಮಾತ್ರವಾದರೂ ಕಣ್ಣುಮುಚ್ಚುವುದು ಅಪಾಯಕರವೆಂದುಕೊಂಡ.

ಇಷ್ಟರಲ್ಲಿ ಆತನಿಗೆ ಕೋಣೆಯ ಬಾಗಿಲನ್ನು ಯಾರೋ ಉಗುರಿನಿಂದ ಪರಚುತ್ತಿರುವಂತೆ ಭಾಸವಾಯಿತು. ಹತ್ತಿರಹೋಗಿ ಕಿವಿಕೊಟ್ಟು ಕೇಳಿದ. ಯಾರೋ ಬಾಗಿಲು ತೆಗೆಯುವಂತೆ ಮೆಲು ಧ್ವನಿಯಲ್ಲಿ ಕೇಳುತ್ತಿರುವರು. ಕಂಠಸ್ವರದ ಗುರುತು ಹಿಡಿದು ಕೂಡಲೇ ಕದ ತೆಗೆದ. ಒಂದು ಕೈಯಲ್ಲಿ ಬಾಕು ಹಿಡಿದುಕೊಂಡು ಕರುಣಾಕರ ಒಳಗೆ




ಪ್ರವೇಶಿಸಿದ. "ಏನು ಸಮಾಚಾರ? ಕೋಟೆಯಲ್ಲಿ ಪ್ರವೇಶಿಸಿದಮೇಲೆ ಮತ್ತೆ ಕಾಣಿಸಲೇ ಇಲ್ಲವಲ್ಲಾ" ಎಂದು ಆತುರದಿಂದ ಪ್ರಶ್ನೆ ಮಾಡಿದ ವಿಜಯ. "ಏನುನಡೆದರೇನು. ಮತ್ತೆ ನಾವಿಲ್ಲಿಕಲೆತೆವು. ನೀನು ಮಾತ್ರ ಕೂಡಲೇ ಓಡಿಹೋಗು. ಬೆಳಗಾದರೆ ನಿನ್ನ ಪ್ರಾಣ ಉಳಿಯದು. ಅವರು ಗುಸಗುಸ ಮಾತನಾಡಿಕೊಳ್ಳುತ್ತಿದ್ದುದನ್ನು ನಾನು ಕೇಳಿದೆ" ಎಂದ ಕರುಣಾಕರ. ತರುವಾಯ ಅವರಿಬ್ಬರೂ ಸೇರಿ ಗುಪ್ತದ್ವಾರಕ್ಕಾಗಿ ಹುಡುಕಲು ಪ್ರಾರಂಭಿಸಿದರು. ಇಷ್ಟರಲ್ಲಿ ಕೋಣೆಯ ಹೊರಗೆ ಹೆಜ್ಜೆ ಸಪ್ಪುಳ ಕೇಳಿಸಿತು.

ದೀಪ ಆರಿಸಿ ಅವರಿಬ್ಬರೂ ಕತ್ತಲೆಯಲ್ಲಿ ಅವಿತಿಟ್ಟುಕೊಂಡರು. ಕೋಣೆಯ ಮೂಲೆ





"ಅಸಲಿಗೇ ಮೋಸಬಂತು. ನನ್ನನ್ನು ಹಿಡಿಯುವವರೆವಿಗೂ ಅವರು ಸುಮ್ಮನಿರುವುದಿಲ್ಲ. ಬಾಗಿಲು ತೆಗೆದು ನನ್ನನ್ನು ಹೊರಗೆ ಹೋಗಗೊಡು. ಅವರು ನನ್ನನ್ನು ಹಿಡಿದುಕೊಂಡು ಸಂಭ್ರಮಪಡುತ್ತಿರುವಾಗ, ನೀನು ಉಪಾಯವಾಗಿ ತಪ್ಪಿಸಿಕೊಂಡು ಹೊರಟುಬಿಡು" ಎಂದು ಸಲಹೆಕೊಟ್ಟ ಕರುಣಾಕರ. ವಿಜಯನಿಗೆ ಆಗ ಪರಿಸ್ಥಿತಿ ಎಲ್ಲಾ ಅರ್ಥವಾಯಿತು.

"ನೀನು ಕರುಣಾಕರನಲ್ಲ. ಕರುಣ ನೀನೇ!" ಎಂದು ಉದ್ಗಾರ ತೆಗೆದ. ಕರುಣ ಬದುಲು ಹೇಳದೆ ತಲೆತಗ್ಗಿಸಿ ನಿಂತುಕೊಂಡಳು.

"ಕರುಣಾ! ಮಿಂಚಿಹೋದುದೇನಿಲ್ಲ. ಬದುಕಿ ಚೆನ್ನಾಗಿದ್ದರೆ ನಮ್ಮಿಬ್ಬರಿಗೂ ಅಗಲಿಕೆ ಇರಲಾರದು. ಸಾವು ತಪ್ಪುವಹಾಗಿಲ್ಲ. ನಾವಿಬ್ಬರೂ ಒಂದೇಸಾರಿ ಸಾಯುವ" ಎಂದ ವಿಜಯ.

ಯಾರೋ ಬಾಗಿಲನ್ನು ಬಲವಾಗಿ ಹೊಡೆಯುತ್ತಿದ್ದಾರೆ. ಮರು ನಿಮಿಷದಲ್ಲೇ ಭೀಮವರ್ಮನ ಕಂಠಧ್ವನಿ: "ಬಾಗಿಲು ತೆಗೆ ವಿಜಯಾ. ಒಳಗೆ ಯಾರಿರುವುದೋ ತಿಳಿದಿದೆ. ಬೂಟಾಟಿಕೆ ಸಾಕಿನ್ನು" ಎಂದನಾತ.

ಕೂಡಲೇ ವಿಜಯವರ್ಮ ಮತ್ತು ಕರುಣ ಗುಪ್ತದ್ವಾರದ ಕಡೆಗೆ ಓಡಿದರು. ಅವರು ಹೊರಬೀಳುವುದಕ್ಕೂ, ಭೀಮವರ್ಮನ ಭಟರ ಹೊಡೆತಕ್ಕೆ ಬಾಗಿಲು ಮುರಿಯುವುದಕ್ಕೂ ತಾಳೆಬಿತ್ತು.

ಯೊಂದರಲ್ಲಿ ಹಲಿಗೆಗಳು ಸ್ವಲ್ಪ ಸರಿದು ತುಸ ಬೆಳಕು ಒಳಗೆ ಪ್ರವೇಶಿಸಿತು. ವಿಜಯ ಮತ್ತು ಕರುಣಾಕರರು ಉಸಿರು ಬಿಗಿಹಿಡಿದುಕೊಂಡು ಇದನ್ನು ಗಮನಿಸುತ್ತಿದ್ದರು.

ಇಷ್ಟರಲ್ಲಿ ಭವನದ ಹೊರಗೆ ಗದ್ದಲವಾಯಿತು. ತತ್‌ಕ್ಷಣ ಗುಪ್ತದ್ವಾರ ಮುಚ್ಚಿಕೊಂಡಿತು. ಇದು ಸರಿಯಾದ ಸಮಯವಲ್ಲವೆಂದು 'ಹಂತಕನು' ಹೊರಟು ಹೋಗಿರಬೇಕು! ಹೊರಗಿನ ಕೂಗಾಟ ಸ್ಪಷ್ಟವಾಗಿ ಕೇಳಿಸುತ್ತಿದೆ. "ಕರುಣ ಎಲ್ಲಿ? ಹುಡುಕಿ-ಉಂ, ಹುಡುಕಿ" ಎಂದು ಯಾರೋ ಹೇಳುತ್ತಿದ್ದಾರೆ.

"ಕರುಣ ಯಾರಪ್ಪಾ? ಕರುಣಾಕರಾ, ನಿನ್ನನ್ನು ಹುಡುಗಿಯೆಂದು ಭ್ರಮೆ ಪಡುತ್ತಿದ್ದಾರೆಯೆ?" ಎಂದ ವಿಜಯ.



ಗುಪ್ತ ದ್ವಾರಕ್ಕೆ ಆಚೆ ಇರಕಾಗಿಯೂ, ಕತ್ತಲೆಯಾಗಿಯೂ ಇದ್ದ ಒಂದು ದಾರಿಯಲ್ಲಿ ಹೋಗಲು ಬೇರೊಂದು ರಹಸ್ಯ ಪ್ರದೇಶ ವನ್ನು ಸೇರಿಕೊಂಡರು. ಮುಂದೆ ಹಾದಿ ತೋರದೆ ಅಲ್ಲೇ ನಿಂತುಬಿಟ್ಟರು.

ಈ ಪ್ರಮಾದ ಸಮಯದಲ್ಲಿ ಕರುಣ ವಿಜಯನಿಗೆ ತನ್ನ ಕಥೆಯನ್ನೆಲ್ಲಾ ಹೇಳಿದಳು. ತಾನೊಬ್ಬ ಜಮೀನುದಾರನ ಮಗಳೆಂತಲೂ ಅನಾಥಳಾದುದರಿಂದ ಚಿಕ್ಕಂದಿನಿಂದ ಚಂದ್ರ ದುರ್ಗಾಧಿಪತಿಯ ಮನೆಯಲ್ಲೇ ಬೆಳೆದ ನೆಂತಲೂ, ದ್ರೋಹ ಬುದ್ಧಿಯಿಂದ ಭೀಮ ತನ್ನನ್ನು ಬಲವಂತಮಾಡಿ ಕರೆಯಿಸಿಕೊಂಡು ತನ್ನನ್ನು ಪುರುಷವೇಷ ಧರಿಸುವಂತೆ ಮಾಡಿದ ನೆಂದೂ ಹೇಳಿದಳು.

ಈ ಕಥೆ ಕೇಳಿ ವಿಜಯನಿಗೆ ತುಂಬಾ ಮನ ಕರಗಿತು. "ಕರುಣ, ಈ ಶರೀರದಲ್ಲಿ ಪ್ರಾಣವಿರುವವರೆವಿಗೂ ನಿನ್ನನ್ನು ಬಿಟ್ಟಿರುವು ದಿಲ್ಲ" ಎಂದು ಪ್ರತಿಜ್ಞೆ ಮಾಡಿದ.

ಮತ್ತೆ ಹೆಜ್ಜೆಯ ಸಪ್ಪಳ ಕೇಳಿಸಿತು. ತಿರುಗಿ ನೋಡಿದರು. ರಾಮುಸಿಂಗ್ ನಿಂತಿ ದ್ದಾನೆ. "ಓ ಇಲ್ಲೇ ಇದ್ದಾರೆ. ಇನ್ನೇನು. ನೆನೆಸಿದಂತೆ ನಡೆದಿದೆ" ಎಂದ ರಾಮುಸಿಂಗ್. ವಿಜಯವರ್ಮ ಬಾಕು ಹೊರ ತೆಗೆದ.

"ತಡೆಯಯ್ಯಾ, ದೊಡ್ಡ ಮನುಷ್ಯ. ಓಡಿ ಹೋಗಲು ದಾರಿ ಕಾಣಿಸಲಿಲ್ಲ. ಹೌದೋ? ನಾನು ತೋರಿಸುತ್ತೇನೆ" ಎಂದ ರಾಮುಸಿಂಗ್ ಕಿರುನಗೆ ಬೀರುತ್ತಾ. ವಿಜಯವರ್ಮನಿಗೆ ಆತನ ಮುಖದಲ್ಲಿಸ್ನೇಹಭಾವ ಕಂಡುಬಂತು. ಆತನು ತಮ್ಮ ಮಿತ್ರನೆಂದು ಸಂತೋಷಪಟ್ಟ. ರಾಮುಸಿಂಗನು ಅವರಿಗೆ ಈ ಮೊದಲೇ ಭೀಮ ವರ್ಮನ ದೂತನು ಹೋದ ಮಾರ್ಗವನ್ನು ತೋರಿಸಿದ. ಗೋಡೆಯಲ್ಲಿ ಅಣಿಮಾಡಿದ್ದ ಶಿಲೆಯೊಂದನ್ನು ಸ್ವಲ್ಪ ಸರಿಸಲು ದಾರಿ ಏರ್ಪಟ್ಟಿತು. ಕೂಡಲೇ ಓಡಿಹೋಗುವಂತೆ ಅವರಿಗೆ ಸಲಹೆಕೊಟ್ಟು ರಾಮುಸಿಂಗ್ ಅಲ್ಲಿಂದ ಮಾಯವಾದ.

ಕರುಣ ವಿಜಯವರ್ಮರು ಆ ದಾರಿಯಲ್ಲೇ ಹೋಗಿ ಕೋಟೆಯ ಗೋಡೆ ಸೇರಿದರು. ಅಲ್ಲಿ ಭೀಮವರ್ಮನ ದೂತನು ಇಳಿದು ಹೋದ ಕಿಟಕಿ ಇತ್ತು. ಅದರ ಸಾಲಾಕಿಗೆ ಒಂದು ಹಗ್ಗ ಕಟ್ಟಿದೆ. 'ಭೇಷ್' ಎಂದುಕೊಂಡ

ವಿಜಯವರ್ಮ. ಇಷ್ಟರಲ್ಲಿ ಹಿಂದಿನಿಂದ ಕೂಗಾಟ ಕೇಳಿಸಿತು.

"ಬಾ, ಕರುಣ. ತಡಮಾಡಿದರೆ ಮುಪ್ಪು" ಎಂದ ವಿಜಯ. ಆದರೆ ಕರುಣ ಕಿಟಕಿ ಯಿಂದ ಕಂದಕವನ್ನು ನೋಡಿ ಗಡಗಡನೆ ನಡುಗಿಬಿಟ್ಟಳು. ಭೀಮವರ್ಮನ ಭಟರು ಅಲ್ಲಿಗೆ ಬಂದೇಬಿಟ್ಟರು. ಏನಾದರಾಗಲೀ ಎಂದು ವಿಜಯ ಕರುಣೆಯನ್ನು ಹಿಂದೆಬಿಟ್ಟು ಹಗ್ಗದ ಸಹಾಯದಿಂದ ಹೊರಕ್ಕೆ ಹಾರಿ ಬಿಟ್ಟ. ಮೇಲಿಂದ ಬಾಣಗಳ ಸುರಿಮಳೆ ಆಯಿತು. ಆದರೆ ವಿಜಯವರ್ಮ ಅದಕ್ಕೆ ಲೆಕ್ಕಮಾಡದೆ ಅಗಳ್ತೆಯನ್ನು ಈಜಿ ಹೊರಗೆ ಬಂದ. ಪೊದರಿನ ಮರೆಯಲ್ಲಿ ಆತನಿಗೆ ಭಯ ವಿಲ್ಲದಾಯ್ತು.

ಸ್ವಲ್ಪದೂರ ಹೋಗಲು ಶಬ್ದವೇಧಿಯ ಬಾಣಕ್ಕೆ ಆಹುತಿಯಾದ ಭೀಮವರ್ಮನ ದೂತನ ಶವ ಕಾಣಿಸಿತು. ಕುತೂಹಲದಿಂದ ಆ ಶವವನ್ನು ಜಪ್ತಿಮಾಡಲು ಭೀಮವರ್ಮನು ಪ್ರತಿಪಕ್ಷದಲ್ಲಿ ಸೇರುವೆನೆಂದು ದೇವದುರ್ಗಾಧಿ ಪತಿಗೆ ಬರೆದ ಕಾಗದ ಸಿಕ್ಕಿತು. ಯಾವುದ ಕ್ಕಾದರೂ ಪ್ರಯೋಜನವಾದೀತೆಂದು ಅದನ್ನು ತನ್ನ ಕಿಸೆಯಲ್ಲಿ ಸೇರಿಸಿದ ವಿಜಯ.

ಇನ್ನಷ್ಟು ದೂರ ಹೋಗಲು ಆತನಿಗೆ ಶಬ್ದವೇಧಿಯ ದಳದವರು ಕಾಣಿಸಿದರು. ಈಸಾರಿ ಅವರೊಂದಿಗೆ ಅವರ ನಾಯಕನ ಹತ್ತಿರಹೋಗಲು ಹಿಂದೇಟು ಹಾಕಲಿಲ್ಲ ವಿಜಯವರ್ಮ. ಚಂಡಿದಾಸನೇ ಅವರ ನಾಯಕ. ಆತನು ವಿಜಯನನ್ನು ಹೃದಯ ಪೂರ್ವಕವಾಗಿ ಆಹ್ವಾನಿಸಿದ. ವಿಜಯವರ್ಮ ನಿಗೆ ಆಗ ತಿಳಿಯಿತು ಚಂಡಿದಾಸನೇ ಶಬ್ದ ವೇಧಿ ಎಂದು.

"ಕರುಣೆಯನ್ನು ಬಿಟ್ಟು ಬಂದಿದ್ದು ಬುದ್ಧಿ ವಂತಿಕೆಯಾದ ಕೆಲಸ" ಎಂದು ವಿಜಯ ನನ್ನು ಸಮಾಧಾನಪಡಿಸಿದ.

'ನಿನ್ನ ವಿಷಯವೆಲ್ಲಾ ತಿಳಿಯಿತು. ನಿನ್ನ ದಿನಗಳನ್ನು ಲೆಕ್ಕಮಾಡುತ್ತಿರು' ಎಂಬರ್ಥ ಬರುವ ಕಾಗದವನ್ನು ವಿಜಯವರ್ಮ ಭೀಮ ವರ್ಮನಿಗೆ ಬರೆದ. ಆ ಕಾಗದ ನೋಡಿ ಭೀಮವರ್ಮ ಹಲ್ಲು ಕಟಕಟ ಕಡಿದ.

[ಇನ್ನೂ ಇದೆ]






ಅದೊಂದು ದಟ್ಟವಾದ ಅಡವಿ. ಮಟಮಟ ಮಧ್ಯಾಹ್ನ. ಬಿಸಿಲು ಬಹಳ ತೀವ್ರವಾಗಿದೆ. ಅಂತಹ ಸಮಯದಲ್ಲಿ ಒಂದು ನರಿಗೆ ತುಂಬಾ ಬಾಯಾರಿಕೆ ಆಯಿತು. ಹತ್ತಿರದಲ್ಲೇ ಒಂದು ಕೊಳ ಕಾಣಿಸಲು, ಅಲ್ಲಿಗೆ ಹೋಗಿ ತನ್ನ ಬಾಯಾರಿಕೆ ತೀರಿಸಿಕೊಂಡು, ಅಲ್ಲೇ ಒಂದು ಮರದಡಿಯಲ್ಲಿ ಕುಳಿತು ವಿಶ್ರಾಂತಿ ಪಡೆಯುತ್ತಿತ್ತು.

ಅದೇ ಸಮಯಕ್ಕೆ ಅಲ್ಲಿಗೊಂದು ತೋಳ ಬಂತು. ನರಿಯನ್ನು ಕಂಡು ಅದಕ್ಕೆ ಬಹಳ ಸಂತೋಷವಾಯಿತು. ನರಿಗೆ ಧೈರ್ಯ ಸಾಹಸಗಳು ಇಲ್ಲವಾದರೂ, ಬಲೇ ಉಪಾಯಕಾರಿ ಎಂಬ ವಿಷಯ ಅದಕ್ಕೆ ತಿಳಿದಿತ್ತು.

"ಏನು ತಮ್ಮಾ, ವಿರಾಮವಾಗಿ ಕುಳಿತಿರುವೆ? ಬೇಟೆ ಜೋರಾಗಿ ನಡೆದಂತೆ ತೋರುವುದು" ಎಂದಿತು ತೋಳ.

"ಬೇಟೆಯೂ ಇಲ್ಲ, ಮಣ್ಣೂ ಇಲ್ಲ. ಬಿಸಿಲಿನ ತಾಪದಿಂದ ಗಂಟಲು ಒಣಗಿ ಹೋಗತ್ತಿರಲು ಬೇಟೆ ಏನುಬಂತು ಬೇಟೆ. ಏನು ಬಿಡಪ್ಪಾ ಈ ಬೇಟೆ. ದಿನಾಕೋಳಿ ತಿಂದುತಿಂದು ಬಾಯೇ ಕೆಟ್ಟುಹೋಯಿತು" ಎಂದು ನಿಸ್ಪೃಹತೆ ಯಿಂದ ನುಡಿಯಿತು ನರಿ.

ಈ ಮಾತು ಕೇಳಿ ತೋಳಕ್ಕೆ ತಟಕ್ಕನೆ ಏನೋ ಜ್ಞಾಪಕ ಬಂತು.

"ಹೌದೋ, ತಮ್ಮಾ. ನಿನ್ನಹಾಗೆ ನಾನೂ ಪೇಚಾಡುತ್ತಿದ್ದೇನೆ. ಪ್ರತಿನಿತ್ಯ ಈ ಕುರಿ. ಜಿಂಕೆ ಬಿಟ್ಟು ಮತ್ತೆ ಹೊಸದೇನೂ ಇಲ್ಲ. ನನಗಂತೂ ಅವನ್ನು ತಿಂದು ತಿಂದು ಬಹಳೇ ಬೇಸರವಾಗಿಬಿಟ್ಟದೆ" ಎಂದಿತು ತೋಳ.

ಅಷ್ಟರಲ್ಲಿ ಎಲ್ಲಿಂದಲೋ ಒಂದು ಚಿರತೆ ಅಲ್ಲಿಗೆ ಬಂತು. ಅದನ್ನು ನೋಡಿದಕೂಡಲೇ ನರಿ ಮತ್ತು ತೋಳ ತಮ್ಮ ಬಾಲಗಳನ್ನು ಆಡಿಸಿ, ಕಿವಿಗಳನ್ನು ಕುಣಿಸಿ, ಭಕ್ತಿಯಿಂದ ತಲೆತಗ್ಗಿಸಿ ನಮಸ್ಕಾರ ಮಾಡಿದವು.

"ಓ, ಏನು ಭಾವಮೈದುನರು ತುಂಬಾ ಮಾತುಕತೆ ನಡೆಸುತ್ತಿರುವಿರಿ. ಭಾರಿ ಬೇಟೆಗೆ ಉಪಾಯ ಹೂಡುವಂತಿದೆ!" ಎಂದು ಮಾತ

ಬಿ. ಮಲ್ಲಿಕಾರ್ಜುನ, ಸುಳ್ಯ




ನಾಡಿಸಿ, ಅಲ್ಲೇ ಬಂದು ಮರದ ನೆರಳಲ್ಲಿ ಕುಳಿತುಕೊಂಡಿತು ಚಿರತೆ.

ನರಿ ತೋಳ ಮುಖಮುಖ ನೋಡಿಕೊಂಡವು. ತರುವಾಯ ನಮ್ರತೆಯಾಗಿ ನುಡಿಯಿತು ನರಿ: "ಭಾವಂದಿರ ಧೈರ್ಯ, ದರ್ಪಗಳ ಮುಂದೆ ನಾವೆಲ್ಲಿ? ನಾವು ಎಂದಾದರೂ ಕಾಡುಹಂದಿಯ ಮಾಂಸದ ರುಚಿ ನೋಡಿರುವೆವೇ? ಒಂದಿಷ್ಟು ಕಾಡೆಮ್ಮೆ ಮೂಳೆ ಕಡಿದಿರುವೆವೇ? ನಾವೆಷ್ಟು ನಮ್ಮ ಬೇಟೆ ಎಷ್ಟು" ಎಂದಿತು.

"ನೀವೇನೋ ತಿಳಿದುಕೊಂಡಿದ್ದೀರಿ. ಕಾಡು ಹಂದಿಮಾಂಸ, ಕಾಡೆಮ್ಮೆ ತಿಂದುಂಡು ನಾಲಿಗೆ ಜಿಡ್ಡುಕಟ್ಟಿ ಹೋಯಿತು. ಭಾವ, ತಿಂದರೆ ಮತ್ತೇಭದ ಕುಂಭಸ್ಥಳ ತಿನ್ನಬೇಕು. ಅದು ಮಜಾ. ಏನಂತೀರಿ" ಎಂದಿತು ಚಿರತೆ.

ಚಿರತೆ ಮಾತು ಕೇಳಿ ನರಿಗೊಂದು ಉಪಾಯ ತೋರಿತು. "ಭಾವ, ನೀವು ಬ್ರಹ್ಮಸ್ವರೂಪಿಗಳೆಂದರೆ ನಂಬಿ. ನಿಮ್ಮ ಆಗಮನದಿಂದ ನಮ್ಮ ಬಾಧೆಗಳೆಲ್ಲ ದೂರವಾದವು. ನಿಮ್ಮನ್ನು ಕಂಡಕೂಡಲೇ ಒಂದು ಉಪಾಯ ಹೊಳೆಯಿತು. ಬಹಳ ಚಲೋ ಉಪಾಯ ಕಂಡಿರಾ?" ಎಂದಿತು ನರಿ.

ಆ ಮಾತು ಕೇಳಿ "ಏನು? ಏನದು?" ಎಂದು ತೋಳ ಮತ್ತು ಚಿರತೆ ಆತುರದಿಂದ ಕೇಳಿದವು.

ಆಗ ನರಿ ಬಾಯಲ್ಲಿ ನೀರೂರುವಂತೆ ಚಮತ್ಕಾರವಾದ ಧೋರಣೆಯಲ್ಲಿ ಹೀಗೆಂದಿತು:

"ಭಾವಂದಿರಿಗೂ, ಅಣ್ಣಂದಿರಿಗೂ ನಾಲಿಗೆಯ ಸವಿ ಸತ್ತಂತೆ ತಿಳಿಯಿತು. ಇನ್ನು ನನ್ನ ವಿಷಯ ಹೇಳಲೇಬೇಕಿಲ್ಲ. ಈ ಪರಿಸ್ಥಿತಿಯಲ್ಲಿ ನಮಗೆ ಹಿರಿಯನಾದ ಸಿಂಹದ ಹತ್ತಿರ ಹೋಗಿ, ಆತನೊಂದಿಗೆ ಬೇಟೆಗೆ ಹೋದರೆ ಚೆನ್ನ ಎಂದು ನನ್ನ ಉದ್ದೇಶ." "ಭೇಷ್. ಒಳ್ಳೇ ಉಪಾಯ" ಎಂದು ತೋಳ ಮತ್ತು ಚಿರತೆ ನರಿಯನ್ನು ಮೆಚ್ಚಿಕೊಂಡವು. ನರಿಯ ಸಲಹೆಯ ಪ್ರಕಾರ ಅವು ಮೂರೂ ಮೃಗರಾಜನ ಹತ್ತಿರಹೋದವು. ತಾವು ಬಂದ ಕಾರ್ಯವನ್ನು ಅದಕ್ಕೆ ವಿನಯವಾಗಿ ವಿವರಿಸಿದವು. ಎಲ್ಲಾ ಸಾವಧಾನಚಿತ್ತದಿಂದ




ಕೇಳಿ "ಅಗತ್ಯವಾಗಿ ಆಗಲಿ" ಎಂದು ಅಂಗೀಕರಿಸಿತು ಸಿಂಹ.

ಈಗ ಮೃಗರಾಜನೊಂದಿಗೆ ಆ ಮೂರು ಮೃಗಗಳೂ ಆ ಮಟಮಟ ಮಧ್ಯಾಹ್ನದ ಬಿಸಿಲಿನಲ್ಲಿ ಆನೆಯನ್ನು ಹಿಡಿಯಲಿಕ್ಕಾಗಿ ಹೊರಟವು.

ಮುಂದೆ ಸಿಂಹ, ಅದರಹಿಂದೆ ಮಿಕ್ಕ ಮೂರು ಪ್ರಾಣಿಗಳು ಸಾಲಾಗಿ ನಡೆದವು.

ಸೂರ್ಯನು ಅಸ್ತಮಿಸುವ ಸಮಯವಾದರೂ ಅದು ಮೂರೂ ಹಾಗೇ ತಿರುಗಾಡುತ್ತಿವೆ. ಎಷ್ಟು ತಿರುಗಿದರೂ ಅವು ಆಶಿಸಿದ ಆನೆ ಸಿಗಲೊಲ್ಲದು.

ಆನೆ ಹಾಗಿರಲಿ, ಆನೆಯ ಸುಳಿವೂ ಕಾಣಿಸದಾಯಿತು. ಹಸಿವು ಅಡಗಿಸಲು ಯಾವುದೋ ಒಂದು ಮಾಂಸ ಸಿಕ್ಕಿದರೆ ಸಾಕಪ್ಪಾ, ಎಂದೆನ್ನುವ ಪರಿಸ್ಥಿತಿಗೆ ಆ ನಾಲ್ಕು ಮೃಗಗಳೂ ಬಂದವು.

ಅಷ್ಟರಲ್ಲಿ ಆ ದಾರಿಯಲ್ಲಿ ಒಂದು ಜಿಂಕೆ ಹೋಗುತ್ತಿರುವುದನ್ನು ಕಂಡು ಅದನ್ನು ಹಿಡಿದು ಕೊಂದುಬಿಟ್ಟವು.

ಆ ಜಿಂಕೆಯನ್ನು ನರಿ ಸರಿಸಮವಾಗಿ ನಾಲ್ಕು ಭಾಗ ಮಾಡಲು ನಿರ್ಧರಿಸಿತು. ಹಸಿವಿನಿಂದ ಒದ್ದಾಡುತ್ತಿದ್ದ ತೋಳ ಮತ್ತು ಚಿರತೆ ತಮ್ಮ ತಮ್ಮ ಪಾಲಿಗಾಗಿ ಕೈ ಚಾಚಿದವು.

"ನಿಲ್ಲಿ" ಎಂದು ಗರ್ಜಿಸಿತು ಸಿಂಹ. "ನಾನು ಮೃಗರಾಜನೆಂಬ ವಿಷಯ ನಿಮಗೆ ತಿಳಿದಿದೆತಾನೇ? ರಾಜನಾದ ನನಗೆ ಎರಡು ಭಾಗ ಬರಬೇಕು. ನ್ಯಾಯಶಾಸ್ತ್ರದ ಪ್ರಕಾರ ನನ್ನ ಸಂತತಿಗೆ ಒಂದು ಭಾಗ. ಉಳಿದಿರುವುದು ಒಂದು ಭಾಗಮಾತ್ರ. ಆ ಭಾಗವನ್ನು ನಿಮ್ಮಲ್ಲಿ ಯಾರಾದರೂ ನನ್ನನ್ನು ಗೆದ್ದು ಪಡೆಯಬಹುದು" ಎಂದು ಹೇಳಿತು.

ಹೀಗೆ ಹೇಳುತ್ತಾ ಮೃಗಗಳಿಗೆಲ್ಲಾ ಒಡೆಯನಾದ ಸಿಂಹ ಆ ಜಿಂಕೆಯನ್ನು ತನ್ನ ಕಾಲು ಕೆಳಗೆ ಎಳೆದುಕೊಂಡು ಯುದ್ಧಕ್ಕೆ ಸಿದ್ಧವಾಯಿತು.

"ದೊಡ್ಡವರೊಡನೆ ಸಹವಾಸವೆಂದರೆ ಇದೇ" ಎಂದುಕೊಂಡು ಸಿಂಹದ ಕಡೆ ನೋಡುತ್ತಾ ನೋಡುತ್ತಾ ಆ ನರಿ, ತೋಳ ಮತ್ತು ಚಿರತೆಗಳು ಮೆಲ್ಲನೆ ಅಲ್ಲಿಂದ ಜಾರಿಕೊಂಡವು.

#  9ರ ಮಹತ್ತು 

(1) ಯಾವುದಾದರೂ ಒಂದು ಸಂಖ್ಯೆಯನ್ನು ಇತ್ತಿಂದ ಅತ್ತ ತಿರುಗಿಸಿ, ಮೇಲಿನ ಸಂಖ್ಯೆಯಿಂದ ಕಳಿ. ಬಂದ ಸಂಖೆಯನ್ನು 9 ರಿಂದ ಭಾಗಿಸಿದರೆ ಏನೂ ಶೇಷ ಉಳಿಯುವುದಿಲ್ಲ.

ಉದಾಹರಣೆಗೆ :

```
  764
  467
  ---
  297 ÷ 9 = 33.
```

ಎ. ಡಿ. ವೋರಾ

(2) ನಿಶ್ಶೇಷವಾಗಿ 9 ರಿಂದ ಬಾಗಿಸುವ ಸಂದರ್ಭದಲ್ಲಿ ಮತ್ತೊಂದು ವಿಚಿತ್ರವಾದ ಉದಾಹರಣೆ ನೋಡು : 864 ಎಂಬ ಸಂಖ್ಯೆ ತೆಗೆದುಕೊಂಡು ಹೇಗೆ ತಾರುಮಾರು ಮಾಡಿದರೂ ಅದನ್ನು 9 ರಿಂದ ಭಾಗಿಸಿದರೆ ಶೇಷ ಉಳಿಯುವುದಿಲ್ಲ. ಹಾಗೆ ತಾರುಮಾರು ಮಾಡಿ ಕೂಡಿಸಿದರೆ ಬರುವ ಮೊತ್ತವನ್ನೂ 9 ರಿಂದ ಭಾಗಿಸಿದರೆ ಶೇಷ ಉಳಿಯುವುದಿಲ್ಲ!

```
 864 ÷ 9 = 96
 846 ÷ 9 = 94
 648 ÷ 9 = 72
 684 ÷ 9 = 76
 486 ÷ 9 = 54
 468 ÷ 9 = 52
 ------------
3996 ÷ 9 = 444
```

ಡಿ. ಪದ್ಮಾಸನ, ಆದವಾನಿ,

(3) 9 ನೇ ಮಗ್ಗಿಯಲ್ಲಿ ಬರುವ ಮತ್ತೆ ಕೆಲವು ಚಮತ್ಕಾರಗಳು: 9 ನ್ನು 5 ರಿಂದ ಗುಣಿಸಿದರೆ 45 ಅಲ್ಲವೇ! 5 ನ್ನು ಇಟ್ಟು ಎರಡು 9 ಗಳಿಂದ ಗುಣಿಸಿದರೆ ಮಧ್ಯೆ 9 ನೇ ಅಂಕಿಯೊಂದಿಗೆ ಅದೇ ಮೊತ್ತ ಬರುತ್ತದೆ. ಉದಾಹರಣೆಗಾಗಿ :

9 × 5 = 45. 99 × 5 = 495. ಇದೇ ರೀತಿ ಮಿಕ್ಕ ಅಂಕಿಗಳು!

| | |
|---|---|
| 9 × 2 = 18 ... 99 × 2 = 198 | 9 × 7 = 63 ... 99 × 7 = 693 |
| 9 × 3 = 27 ... 99 × 3 = 297 | 9 × 8 = 72 ... 99 × 8 = 792 |
| 9 × 4 = 36 ... 99 × 4 = 396 | 9 × 9 = 81 ... 99 × 9 = 891 |
| 9 × 5 = 45 ... 99 × 5 = 495 | 9 × 10 = 90 ... 99 × 10 = 990 |
| 9 × 6 = 54 ... 99 × 6 = 594 | |

ಗಿರಿಜಾಶಂಕರ, ವಿ. ಮೆಸ್ತಾ, ಶಿರಸಿ

(4) 0–ಮೊದಲುಗೊಂಡು 9 ರ ವರೆವಿಗೂ ಅಂಕಿಗಳನ್ನು ಬರೆ. ಈಗ ಮತ್ತೆ 9 ಮೊದಲುಗೊಂಡು 0–ಯುವರೆವಿಗೂ ಮೇಲಿನ ಸಂಖ್ಯೆಗಳನ್ನು ಕೆಳಗೆ ಹಾಕಿಕೊಂಡುಬಾ. ಎರಡು ಸಂಖ್ಯೆಗಳನ್ನೂ ಕೂಡಿದರೆ ಮೊತ್ತವೆಷ್ಟು ಬರುವುದೋ ನೋಡು.

```
0 1 2 3 4 5 6 7 8 9
9 8 7 6 5 4 3 2 1 0
-------------------
9 9 9 9 9 9 9 9 9 9
```

ಬಿ. ವಿವೇಕಾನಂದ, ವಿಲ್ಲುಪುರ




# ಶಾಂತಿ ದೇವತೆ

**ಪೂ**ರ್ವಕಾಲದಲ್ಲಿ ಕೆಲವರು ಕತ್ತಿ ಕಠಾರಿಗಳನ್ನು ಆಶ್ರಯಿಸಿ ಜೀವಿಸುತ್ತಿದ್ದರು. ಅಂದರೆ ಖಡ್ಗವನ್ನು ಕೈಯಲ್ಲಿ ಹಿಡಿದು ಯುದ್ಧಗಳಲ್ಲಿ ಭಾಗವಹಿಸಿ ಜೀವನ ನಡೆಸುತ್ತಿದ್ದರು.

ಹೀಗೆ ಅನೇಕ ಯುದ್ಧಗಳಲ್ಲಿ ಭಾಗ ವಹಿಸಿದ ಯೋಧ ಶೂರಸಿಂಹ. ಆತನಿಗೆ ಒಂದು ಸಮಯದಲ್ಲಿ ಉದ್ಯೋಗವೇ ಇಲ್ಲದಾಯಿತು.

ಏಕೆ? ಎಂದು ನೀವು ಕೇಳಬಹುದು. ರಾಜರಿಗೆ ಯುದ್ಧವೆಂದರೆ ಒಂದು ಬಗೆಯ ಬೇಸರಿಕೆಯುಂಟಾಯಿತು. ಆದುದರಿಂದ ಅವರವರಲ್ಲಿ ಕರಾರು ಮಾಡಿಕೊಂಡರು. ಅಸ್ತ್ರ ಶಸ್ತ್ರಗಳನ್ನು ಮೂಲೆಪಾಲು ಮಾಡಿದರು. ರಾಜ್ಯವು ನೆಮ್ಮದಿಯಾಗಿದ್ದರೆ ಯುದ್ಧಗಳೇಕೆ? ಸೈನಿಕರು ತಾನೇ ಏಕೆ?

ಆಗ ಶೂರಸಿಂಹನಿಗೆ ಕಠಿನ ಸಮಸ್ಯೆಯೊದಗಿತು. ಆತನ ಕೈಯಲ್ಲಾಗುತ್ತಿದ್ದುದೆಲ್ಲಾ ಒಂದೇ ಒಂದು ಕೆಲಸ — ಖಡ್ಗವನ್ನು ಹಿಡಿಯುವುದು. ಎಷ್ಟೇ ತಲೆಗಳನ್ನಾದರೂ ಚೆಂಡಾಡಬಲ್ಲ. ಆದರೀಗ ಯುದ್ಧದಮಾತೇ ಇಲ್ಲವಾಯಿತಷ್ಟೆ. ಆತನಿಗೆ ಮತ್ತೆ ಯಾವ ಕೆಲಸ ಮಾಡಲೂ ಆಗದು. ಹೇಗೆ ಮತ್ತೆ?

"ರಾಜರೆಲ್ಲಾ ಅಂಜುಕುಳಿಗಳಾದರು. ಪ್ರಜೆಗಳು ಪೌರುಷಹೀನರಾದರು. ಇನ್ನು ನನ್ನ ಖಡ್ಗವನ್ನು ಮೂಲೆಗೆಸೆಯಬೇಕೇ? ಅದು ತುಕ್ಕು ಹಿಡಿಯಬೇಕೇ?" ಎಂದು ಆತನಿಗೆ ತುಂಬಾ ಕಳವಳವಾಯಿತು.

ಏನಾದರೇನು, ತಿಂಡಿಗೂ ಬಟ್ಟೆಗೂ ಗತಿಯಿಲ್ಲದೆ ಶೂರಸಿಂಹ ಸೊರಗಿಹೋಗುತ್ತಿದ್ದ; ಕಾಳುಕಡ್ಡಿಯಿಲ್ಲದೆ ಆತನ ಕುದುರೆ ಕೃಶವಾಗುತ್ತಿತ್ತು. ಕಡೆಗೆ ವಿಧಿಯಿಲ್ಲದೆ ಕೆಲಸಕ್ಕಾಗಿ ಆತನು ಅಲೆದಾಡಲು ಪ್ರಾರಂಭಿಸಿದ.

ಹೀಗೇ ಹೋಗುತ್ತಿರುವಲ್ಲಿ ಒಂದು ದಿನ ಮುಂಜಾನೆ ಒಂದು ಹೊಲದ ಹತ್ತಿರ ಬಂದ. ಹೊಲ ಉಳುತ್ತಿದ್ದ ರೈತನನ್ನು ಕುರಿತು ಕುದುರೆಯಮೇಲೆ ಕುಳಿತಿದ್ದ ಶೂರಸಿಂಹ ಹೀಗೆಂದ: "ಎಲೈ ನನ್ನ ಹೆಸರು ಶೂರಸಿಂಹ. ಕೇಳಿರುವೆಯಷ್ಟೇ? ನಾನು ಮಹಾ ಶೂರ. ನಾನೀಗ ಕೆಲಸವಿಲ್ಲದೆ ಇದ್ದೇನೆ. ನನಗೆ ಏನಾದರೂ

ಕೆ. ರಮಾವತಿ, ಮಡಿಕೇರಿ




ಕೆಲಸ ತೋರಿಸಿ ಕೊಡುವೆಯಾ?" ಎಂದ. ಅದನ್ನು ಕೇಳಿ ರೈತ ಉಳುವುದನ್ನು ನಿಲ್ಲಿಸಿ ಶೂರಸಿಂಹನಕಡೆ ತಲೆ ಎತ್ತಿ ನೋಡಿದ. ಒರೆಯಲ್ಲಿರುವ ಕತ್ತಿ, ಆತನ ಮಾತಿನ ಧೋರಣೆ ನೋಡಿ ಮೊದಲು ರೈತನಿಗೆ ತುಸ ಭಯವಾಯಿತು. ಮರುಕವೂ ಆಯಿತು. "ನೇಗಿಲು ಹಿಡಿಯುವುದು ಸಾಧ್ಯವಾದರೆ ನಿನ್ನ ಕತ್ತಿ ಕಠಾರಿಗಳನ್ನು ಒಂದೆಡೆ ಬಿಸಾಡಿ ಬಾರಯ್ಯ" ಎಂದ.

ಅದಕ್ಕೆ ಶೂರಸಿಂಹ "ನೇಗಿಲು ಹಿಡಿಯುವುದು ನನ್ನಿಂದ ಸಾಧ್ಯವಿಲ್ಲ. ನಿನಗೆ ಶತ್ರುಗಳು ಯಾರಾದರೂ ಇದ್ದರೆ ಹೇಳು. ನಿಮಿಷಮಾತ್ರದಲ್ಲಿ ಅವರ ತಲೆ ಕಡಿದು ನಿನ್ನ ಮುಂದೆ ತಂದಿಡುವೆನು. ನನಗೆಊಟ, ನನ್ನ ಕುದುರೆಗೆ ಒಂದಿಷ್ಟುಮೇವು ಏರ್ಪಾಟು ಮಾಡಿದರೆ ಸಾಕು" ಎಂದ.

ರೈತ ಮಾತನಾಡಲಿಲ್ಲ. ಕ್ಷಣಕಾಲ ಶೂರಸಿಂಹನನ್ನು ದುರುಗುಟ್ಟಿ ಕೊಂಡು ನೋಡಿ, ಯಥಾಪ್ರಕಾರ ತನ್ನ ಕೆಲಸದಲ್ಲಿ ಮಗ್ನನಾದ.

"ಒಸ್, ಎಲ್ಲೋ ಪೌರುಷಹೀನರು. ಮನುಷ್ಯನೆಂದಮೇಲೆ ಶತ್ರು ಇರುವುದಿಲ್ಲವೇ? ಕೈಲಾಗದಿದ್ದರೆ ಮತ್ತೇನು ಮತ್ತೆ. ಅಲ್ಲ, ನನ್ನನ್ನು ನೇಗಿಲುಹಿಡಿ ಎಂದು ಹೇಳುತ್ತಾನಲ್ಲಾ ಈ ಹೇಡಿ. ನನ್ನಂತಹ ಯೋಧ ಮಾಡಬೇಕಾದ ಕೆಲಸವೇ ಅದು?" ಎಂದು ತನ್ನಲ್ಲಿ ತಾನು ಅಂದುಕೊಂಡ.

ಹಾಗೆಂದುಕೊಂಡು ಆತನು ಅರಣ್ಯಮಾರ್ಗ ಹಿಡಿದು ಹೊರಟ. ತುಸ ದೂರ ಹೋಗಲು ಹಚ್ಚನೆಯ ಮೈದಾನ ವೊಂದು ಕಾಣಿಸಿತು. ಆ ಮೈದಾನದಲ್ಲಿ ದೇವತಾ ವಿಗ್ರಹ ವೊಂದಿದೆ. ಅದು ಯುದ್ಧದೇವತೆ. ಅಲ್ಲಿಗೆ ಉತ್ಸಾಹದಿಂದ ಕುದುರೆಯನ್ನು ಓಡಿಸಿ, ಶೂರಸಿಂಹ ಆ ವಿಗ್ರಹದ ಮುಂದೆ ಬಂದು ನಿಂತ.

ಆ ದೇವಿಯ ವಿಗ್ರಹ 20 ಅಡಿ ಎತ್ತರವಿತ್ತು. ಕಿಡಿಕಾರುವ ಕಣ್ಣುಗಳು, ಕೈಯಲ್ಲಿ ಖಡ್ಗ, ನೋಡಲುಭಯಂಕರವಾಗಿದೆ. ಆದರೆ ಆ ದೇವಿಯ ಕೈಯಲ್ಲಿ ಖಡ್ಗವನ್ನು ಕಂಡು ಶೂರಸಿಂಹನಿಗೆ ಉತ್ಸಾಹ ವುಂಟಾಯಿತು. "ಆಹಾ, ಏನೀವಿಗ್ರಹ. ಎಲ್ಲಾ ಬಂಗಾರದ ಲೇಪನಮಾಡಿದೆ." ಎಂದು ಕೂಗಿದ.




"ಅಲ್ಲಾಯ್ಯಾ, ಬೆಳ್ಳಿಯವಿಗ್ರಹ. ಇದು ರಜತವಿಗ್ರಹವೇ ಹೊರತು ಸ್ವರ್ಣವಿಗ್ರಹ ವಲ್ಲ" ಎಂದು ಯಾರೋ ನುಡಿದರು. ಅಷ್ಟರಲ್ಲಿ ಆ ವಿಗ್ರಹದ ಹಿಂದಿನಿಂದ ಡಾಲು ಕತ್ತಿ ಧರಿಸಿದ ಒಬ್ಬ ಕುದುರೆ ಸವಾರ ಆತಸಿಗೆದುರಾಗಿ ಬಂದುನಿಂತ.

ಶೂರಸಿಂಹ ಪೌರುಷದಿಂದ ಹಲ್ಲು ಕಟಕಟ ಕಡಿದ. ಒರೆಯಿಂದ ಕತ್ತಿ ಎಳೆದ.

"ಎಲವೋ, ನನ್ನಮಾತು ಧಿಕ್ಕರಿಸುವೆಯಾ? ನನ್ನ ಹೆಸರೇನೋ ನಿನಗೆ ತಿಳಿದಿದೆಯೋ? ಶೂ–ರ–ಸಿಂ–ಹ. ಹಾಂ" ಎಂದ.

ಎರಡನೇ ಯೋಧನು ಪಕಪಕನೆ ನಕ್ಕು, ಕತ್ತಿಯನ್ನು ಒರೆಯಿಂದ ಹೊರಗೆಳೆಯುತ್ತಾ "ಛೆ, ನೀನು ಕಣ್ಣಿಲ್ಲದ ಕುರುಡ. ಬೆಳ್ಳಿಗೂ ಬಂಗಾರಕ್ಕೂ ಬೇಧವರಿಯದ ನಿನ್ನೊಂದಿಗೆ ಯುದ್ಧಮಾಡುವುದು ನನಗೆ ಅವಮಾನವಾಗಿ ತೋರುತ್ತದೆ. ನಾನು ಯಾರೋ ನೀನು ತಿಳಿದು ಮಾತನಾಡುತ್ತಿರುವೆಯಾ? ನಾನು ಧೀರಸಿಂಹ. ಬಾ, ನನ್ನ ಖಡ್ಗಬಲದ ಸವಿ ತೋರಿಸುವೆನು" ಎಂದು ಕುದುರೆಯನ್ನು ಮುಂದಕ್ಕೆ ಓಡಿಸಿದ.

ಮರುಕ್ಷಣದಲ್ಲಿ ಯೋಧರೀರ್ವರೂ ದೊಡ್ಡ ಕದನಕ್ಕೆ ಪ್ರಾರಂಭಿಸಿದರು.

ಖಡ್ಗಗಳ ಝಣತ್ಕಾರ ದಿಂದ, ಕುದುರೆಗಳ ಕೆನೆಯುವಿಕೆಯಿಂದ, ಅವರ ಪೌರುಷ ವಾಕ್ಕುಗಳಿಂದ, ಆ ಪ್ರದೇಶವೆಲ್ಲಾ ಪ್ರತಿಧ್ವನಿಸುತಲಿತ್ತು.

ಅಷ್ಟರಲ್ಲಿಹಠಾತ್ತನೆ "ನಿಲ್ಲಿಸಿ, ಕತ್ತಿಗಳನ್ನು ಒರೆಸೇರಿಸಿ" ಎಂಬೊಂದು ಮಧುರ ಗಂಭೀರ ವಾಣಿ ಕೇಳಿಸಿತು. ಯೋಧರಿಬ್ಬರೂ ಬೆರಗಾಗಿ ಆ ವಾಣಿ ಬಂದ ದಿಕ್ಕಿನ ಕಡೆ ಆಶ್ಚರ್ಯದಿಂದ ನೋಡಿದರು.

ಮಲ್ಲಿಗೆಯ ಹೂವಿನಂತಹ ಬಿಳಿ ವಸ್ತ್ರಗಳನ್ನು ಧರಿಸಿ, ಶಾಂತಮುಖ ಮುದ್ರೆಯುಳ್ಳ ಒಬ್ಬ ಅಂದವಾದ ಯುವತಿ ನಗುತ್ತಾ ಅವರ ಹತ್ತಿರ ಬಂದು—

"ನೀವಿಬ್ಬರೂ ಮಹಾಯೋಧರು! ಅಸಹಾಯ ಶೂರರು!" ಎಂದಳು.

"ಅವನ ವಿಷಯ ನನಗೆ ತಿಳಿಯದು. ನನ್ನ ಹೆಸರು ಶೂರಸಿಂಹ" ಎಂದ ಮೊದಲನೇ ಸವಾರ.

"ಅವನ ವಿಷಯ ನಾನರಿಯೆ. ನನ್ನ ಹೆಸರು ಧೀರಸಿಂಹ" ಎಂದ ಎರಡನೇ ಯುವ.

ಇಬ್ಬರ ಕಡೆ ಆ ಯುವತಿ ನೋಡಿ ಹೀಗೆಂದಳು: "ನಿಮ್ಮ ಖಡ್ಗಗಳಿಗಿರುವ ತೀಕ್ಷಣತೆ ಕೊಂಚವಾದರೂ ನಿಮ್ಮ ಮೆದುಳಿಗೆ ಇದ್ದಿದ್ದರೆ ಈ ಜಗಳ ನಡೆಯುತ್ತಿರಲಿಲ್ಲ."

"ಆ ಮೂರ್ಖನಿಗೆ ದೂರದೃಷ್ಟಿಯಿಲ್ಲ. ಈ ಯುದ್ಧದೇವತೆಯ ವಿಗ್ರಹ ಬೆಳ್ಳಿಯದಂತೆ" ಎಂದು ಪರಿಹಾಸಮಾಡಿದ ಶೂರಸಿಂಹ.

"ಅವನಿಗೆ ದೃಷ್ಟಿ ಮಂದವಾಗಿದೆ. ಬೆಳ್ಳಿಯ ವಿಗ್ರಹವನ್ನು ಚಿನ್ನದ ವಿಗ್ರಹವೆಂದು ವಾದಿಸುವುದು ಅವಿವೇಕವಲ್ಲದೆ ಮತ್ತೇನು" ಎಂದು ಗೇಲಿಮಾಡಿದ ಧೀರಸಿಂಹ.

ಆಗ ಆ ಯುವತಿ ಪಕಪಕ ನಕ್ಕು ಯೋಧರಿಬ್ಬರನ್ನೂ ವಿಗ್ರಹದ ಸುತ್ತಲೂ ಕರೆದುಕೊಂಡು ಹೋದಳು. ಬೆಳ್ಳಿಯದೆಂದು ವಾದಿಸಿದ ಧೀರಸಿಂಹನಿಗೆ ವಿಗ್ರಹದ ಒಂದು ಕಡೆ ಬಂಗಾರದ ಲೇಪನ ಕಾಣಿಸಿತು. ವಿಗ್ರಹ ಬಂಗಾರದ್ದೆಂದು ವಾದಕ್ಕೆ ಇಳಿದ ಶೂರಸಿಂಹನಿಗೆ ಬೆಳ್ಳಿ ಲೇಪನ ಕಾಣಿಸಿತು.

ಇಬ್ಬರೂ ಬೆರಗಾಗಿ ಒಬ್ಬರನ್ನೊಬ್ಬರು ನೋಡಿಕೊಂಡರು. ಆ ಯುವತಿ ಇದ್ದಕ್ಕಿದ್ದಂತೆಯೇ ಅದೃಶ್ಯಳಾದಳು. ಆಕೆಗಾಗಿ ಅವರಿಬ್ಬರೂ ಅತ್ತಿತ್ತ ನೋಡುತ್ತಿರಲು, ಅವರಿಗೆ ಈ ಮಾತುಗಳು ಕೇಳಿಸಿದವು:

"ಯೋಧರೇ, ನಾನು ಶಾಂತಿ ದೇವತೆ. ನೀವಿಬ್ಬರೂ ಮಹಾ ಯೋಧರು. ನಿಮ್ಮಿಬ್ಬರ ಉದ್ದೇಶಗಳೇನೋ ಸರಿಯಾದುವೇ. ಆದರೆ ಜಗಳ ಕಾಯುವುದನ್ನು ಬಿಡಿ. ಚಂಚಲತೆ ಬಿಡಿ. ಆಕ್ರೋಶ ಬಿಟ್ಟುಬಿಡಿ. ಶಾಂತಿ ಜೀವನ ನಡೆಸಿ"

ಶೂರಸಿಂಹ ಮತ್ತು ಧೀರಸಿಂಹರು ತಮ್ಮ ತಮ್ಮ ಕುದುರೆಗಳಿಂದ ಇಳಿದರು. ಒಬ್ಬರನ್ನೊಬ್ಬರು ಆಲಂಗಿಸಿಕೊಂಡರು. ಡಾಲು, ಖಡ್ಗಗಳನ್ನು ವಿಗ್ರಹದ ಮುಂದೆ ಬಿಸಾಡಿದರು. ಅಂದಿನಿಂದ ಅವರಿಬ್ಬರೂ ವ್ಯವಸಾಯ ವೃತ್ತಿಯನ್ನು ಅವಲಂಬಿಸಿ, ಶಾಂತಮಯವಾದ ಬಾಳನ್ನು ನಡೆಸುತ್ತಿರುವರು.





# ಸುಂದರಮೂರ್ತಿ

ಒಂಭತ್ತನೆಯ ಶತಮಾನದ ಪ್ರಾರಂಭದಲ್ಲಿ ಸುಂದರನಾಯನಾರ್ ಎಂಬ ಮಹಾಭಕ್ತನೊಬ್ಬನು ನಮ್ಮ ದೇಶದಲ್ಲಿ ಜನಿಸಿದನು. ಆತನು ಮಹಾ ಭಕ್ತನು ಮಾತ್ರವಲ್ಲ, ಅದ್ಭುತ ಚರಿತನೂ ಹೌದು.

ತಮಿಳು ದೇಶದಲ್ಲಿ ತಿರುನಾವಲೂರ್ ಗ್ರಾಮದಲ್ಲಿ ಒಂದು ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ನಾಯನಾರ್. ಆ ಮಗು ಅಪೂರ್ವ ಸುರೂಪಿಯಾಗಿದ್ದುದರಿಂದ ಸುಂದರರ್ ಎಂಬ ಹೆಸರು ಆತನಿಗೆ ಅನ್ವರ್ಥನಾಮವಾಯಿತು.

ಮಗುವಿನ ಅಂದ ಚೆಂದ, ಅವನ ಚುರುಕುತನ ಆ ಊರಿನ ಹಿರಿಯನಾದ ಮುನರಾಯರನ್ನು ತುಂಬಾ ಆಕರ್ಷಿಸಿತು. ಆತನು ಸುಂದರರ್‌ಅನ್ನು ಕರೆದುಕೊಂಡು ಹೋಗಿ ತನ್ನ ಮನೆಯಲ್ಲಿ ಮಮತೆಯಿಂದ ಸಲಹುತ್ತಿದ್ದನು. ಯುಕ್ತ ವಯಸ್ಸು ಬಂದ ಕೂಡಲೇ ಉಪನಯನಾದಿಕರ್ಮಗಳನ್ನು ಮಾಡಿಸಿದ. ಪ್ರಸಿದ್ಧರಾದ ಗುರುಗಳನ್ನು ಕರೆಯಿಸಿ ಮಗುವನ್ನು ಸಮಸ್ತ ವಿದ್ಯಾಪಾರಂಗತನನ್ನಾಗಿ ಮಾಡಿಸಿದ. ಕ್ರಮೇಣ ಸುಂದರರ್‌ಗೆ ಮದುವೆಯ ವಯಸ್ಸು ಬಂತು. ಸಂಬಂಧ ನಿಶ್ಚಯವಾಯಿತು. ಇನ್ನೇನು ಹಸೆಯ ಮೇಲೆ ಸುಂದರರ್‌ಅನ್ನು ಕೂರಿಸುವಾಗ ಅಲ್ಲಿಗೆ ಒಬ್ಬ ವೃದ್ಧನು ಬಂದು "ಇದೇನಯ್ಯಾ, ಇವನು ನಮ್ಮ ಕುಟುಂಬದ ಸೇವಕ. ನಮ್ಮ ಅನುಮತಿಯಿಲ್ಲದೆ ನೀವು ಇವನಿಗೆ ಹೇಗೆ ಮದುವೆ ಮಾಡುವಿರಿ? ಬೇಕಾದರೆ ಈ ಪತ್ರ ನೋಡಿ. ನನ್ನ ಮಾತು ನಿಜವೋ ಸುಳ್ಳೋ ನಿಮಗೇ ತಿಳಿಯುತ್ತದೆ" ಎಂದ.

ಅಲ್ಲಿ ನೆರೆದಿದ್ದವರೆಲ್ಲಾ ಅಚ್ಚರಿಯಿಂದ ನೋಡುತ್ತಿರಲು ಸುಂದರರ್ ಆ ಪತ್ರವನ್ನು ಆತನ ಕೈಯಿಂದ ಎಳೆದುಕೊಂಡು ಅದನ್ನು ನೋಡದೆಯೇ ಹರಿದು ಬಿಸಾಡಿದ.

ಆದರೂ ಆ ವೃದ್ಧನು ತುಸವಾದರೂ ಚಲಿಸದೆ "ನಮ್ಮದು ತಿರುವೆಣ್ಣೈನಲ್ಲೂರು ಗ್ರಾಮ. ಈಗ ಈ ಹುಡುಗನು ಹರಿದು ಹಾಕಿದ ಪತ್ರ ಬರೀ ನಕಲು ಮಾತ್ರ. ಮೂಲ

ವಿ. ಎಸ್. ಶರ್ಮ, ಮದರಾಸು



ತಾಳೆಗರಿ ಪತ್ರ ನಮ್ಮ ಮನೆಯಲ್ಲೇ ಇದೆ" ಎಂದ.

ಇದನ್ನು ಕೇಳಿ ಅಲ್ಲಿದ್ದವರೆಲ್ಲಾ ಹೀಗೆಂದು ಗಲಭೆ ಮಾಡಿದರು: "ಎಲ್ಲೋ ಹುಚ್ಚು ನಿನಗೆ. ಈ ಹುಡುಗ ಬ್ರಾಹ್ಮಣ. ನಿಮ್ಮ ಮನೆ ಸೇವಕನು ಹೇಗಾಗುವನು? ಎಲ್ಲಾದರೂ ಉಂಟೇ? ಹೋಗಯ್ಯಾ ಹೋಗು. ಬಂದ ದಾರಿ ಹಿಡಿ"

ಅವರ ಕೂಗಾಟ ಕೇಳಿ ಮುದುಕ ಮತ್ತಷ್ಟು ರೊಚ್ಚಿಗೆದ್ದ. ಈ ವಿವಾಹ ನಡೆಯಲು ಸಾಧ್ಯವೇ ಇಲ್ಲ ಅಂದ.

ಈಗ ಸುಂದರರ್ ಕೋಪದಿಂದ "ಸರಿ, ಆ ಪತ್ರವನ್ನು ತೋರಿಸು ಬಾ" ಎಂದು ದುಂಬಾಲುಬಿದ್ದ.

ವೃದ್ಧನು ಒಂದು ತಾಳೆಗರಿ ಪತ್ರವನ್ನು ತಂದು ಗ್ರಾಮಸ್ಥರ ಮುಂದೆ ಇಟ್ಟ. ಅದು ಸುಂದರರ್ ಅಜ್ಜ ಬರೆದ ಪತ್ರ. "ನಾವೂ ನಮ್ಮ ಮುಂದಿನ ಪೀಳಿಗೆಯವರೂ ತಿರುವಾವಲೂರು ಸೈತಾನ್ (ಅಂದರೆ ಹುಚ್ಚ ಅಂತ) ನಿಗೆ ಸೇವಕರಾಗಿರುವೆವು" ಎಂದು ಅದರಲ್ಲಿ ಸ್ಪಷ್ಟವಾಗಿ ಬರೆದಿತ್ತು.

ಈ ಪತ್ರ ಎಲ್ಲರನ್ನೂ ವಿಸ್ಮಯಗೊಳಿಸಿತು. ಪಂಚಾಯತಿ ಮಾಡಿದರು. ಸುಂದರರ್ ಅಜ್ಜ ಬರೆದಿದ್ದ ಕೆಲವು ಪತ್ರಗಳನ್ನು ತಂದು ಸಹಿಯನ್ನು ಹೋಲಿಸಿ ನೋಡಿದರು.

ಇದೆಲ್ಲಾ ಪರೀಕ್ಷಿಸಿ ನೋಡಿದ ತರುವಾಯ "ಈ ಪತ್ರ ಹುಡುಗನ ಅಜ್ಜಂದಿರೇ ಬರೆದಿದ್ದಾರೆ. ಅದರಲ್ಲಿ ಸಂದೇಹವೇ ಇಲ್ಲ" ಎಂದು ಗ್ರಾಮದ ಹಿರಿಯರು ತೀರ್ಮಾನಿಸಿದರು.

"ಹಾಗಾದರೆ ನಿಮ್ಮ ಮನೆ ಎಲ್ಲಿದೆಯೋ ತೋರಿಸಯ್ಯಾ" ಎಂದು ಮುದುಕನನ್ನು ಗದರಿಸಿ ಕೇಳಿದರು.

ಆತನು ನಗುತ್ತಾ "ಬನ್ನೀ" ಎಂದು ಅವರನ್ನು ಕರೆದುಕೊಂಡು ಹೋಗಿ ಗರ್ಭಗುಡಿಯನ್ನು ಸೇರಿ ಅಂತರ್ಧಾನನಾದನು.

ಆ ಕ್ಷಣವೇ ಸುಂದರರ್‌ಗೆ ನಿದ್ರೆಯಿಂದ ಎಚ್ಚೆತ್ತಂತೆ ಆಯಿತು. ತಕ್ಷಣ ಜ್ಞಾನೋದಯವಾಯಿತು; ಪೂರ್ವಜನ್ಮ ಸ್ಮೃತಿಬಂತು:

ಹಿಂದಿನ ಜನ್ಮದಲ್ಲಿ ಒಂದುಸಾರಿ ಸುಂದರರ್ ಎಂಬ ಹುಡುಗ ಕೈಲಾಸ ಪರ್ವತಕ್ಕೆ ಹೋಗಿ ಪಾರ್ವತಿದೇವಿಯ ಪಕ್ಕದಲ್ಲಿದ್ದ ಪರಿ




ಚಾರಿಕೆಯರನ್ನು ನೋಡಿ "ಇಂತಹ ಅಪ್ಸರೆಯರನ್ನು ಮದುವೆಯಾಗದ ಬಾಳು ಒಂದು ಬಾಳೇ" ಎಂದು ಮನಸ್ಸಿನಲ್ಲಿ ಅಂದುಕೊಂಡನಂತೆ. ಪರಮೇಶ್ವರನು ಕುಪಿತಗೊಂಡು "ಎಲೈ ನೀನು ಭೂಲೋಕದಲ್ಲಿ ನನ್ನ ಸೇವಕನಾಗಿ ಜನಿಸು" ಎಂದು ಶಾಪವಿತ್ತನಂತೆ.

ಸುಂದರರ್ ಪರಮೇಶ್ವರನ ಪಾದಗಳ ಮೇಲೆ ಬೀಳಲು ಪರಮಶಿವನು ತನ್ನ ಭಕ್ತನ ಮೇಲೆ ಕರುಣೆಗೊಂಡು ತರುಣೋಪಾಯವನ್ನು ಸೂಚಿಸಿದನಂತೆ. ಈ ಶಾಪದಿಂದಲೇ ಸುಂದರರ್‌ಗೆ ಭೂಲೋಕದಲ್ಲಿ ಮಾನವ ಜನ್ಮ ಬಂತು.

ಜ್ಞಾನೋದಯವುಂಟಾದ ಕ್ಷಣದಿಂದ ಸುಂದರರ್‌ಗೆ ದಿನದಿನಕ್ಕೂ ಈಶ್ವರನಲ್ಲಿ ಭಕ್ತಿ ಹೆಚ್ಚುತ್ತಿತ್ತು. ಆತನು ದೇಶದಲ್ಲಿದ್ದ ಶೈವಕ್ಷೇತ್ರಗಳೆಲ್ಲವನ್ನೂ ಸಂದರ್ಶಿಸಲು ಪ್ರಾರಂಭಿಸಿದ. ಹೋದೆಡೆಗಳಲ್ಲೆಲ್ಲಾ ಮೃದುಮಧುರವಾದ ಕವಿತ್ವದಿಂದ ತನ್ಮಯತೆಯುಂಟಾಗುವಂತೆ ಈಶ್ವರನನ್ನು ಸ್ತುತಿಸಿ ಹಾಡುವನು.

ಸುಂದರರ್ ಸಂದರ್ಶಿಸಿದ ಪ್ರತಿ ಕ್ಷೇತ್ರದಲ್ಲೂ ಒಂದೊಂದು ಮಹಿಮೆಯನ್ನು ತೋರಿಸುತಲಿದ್ದ. ಹೀಗೆ ಸುಂದರರ್ ಚಿದಂಬರಂ, ತಿರುವಾರೂರುಗಳಿಗೆ ಹೋದ.

ತಿರುವಾರೂರಿನಲ್ಲಿರುವಾಗ ಪರವೈನಾಚ್ಚಿಯಾರ್ ಎಂಬ ಹುಡುಗಿಯೊಂದಿಗೆ ಆತನಿಗೆ ವಿವಾಹವಾಯಿತು. ಈ ನಾಚ್ಚಿಯಾರ್ ಹಿಂದಿನ ಜನ್ಮದಲ್ಲಿ ತಾನು ಕೋರಿದ ಪಾರ್ವತೀದೇವಿಯ ಸೇವಕಿಯರಲ್ಲೊಬ್ಬಳೆಂದು ಸುಂದರರ್ ಪೂರ್ವ ಜನ್ಮಸ್ಮೃತಿಯಿಂದ ಗ್ರಹಿಸಿದ.

ಸುಂದರರ್ ತಿರುವತ್ತಿಯೂರ್ ಗ್ರಾಮ ಸೇರಿಕೊಂಡ ಮೇಲೆಭಗವಂತನ ಆಜ್ಞೆಯನ್ನು ಶಿರಸಾವಹಿಸಿ ಸಂಗಲಿನಾಚ್ಚಿಯಾರ್ ಎಂಬ ಮತ್ತೊಬ್ಬ ಕನ್ಯೆಯನ್ನು ವಿವಾಹವಾದ.

ಈ ಸಂಗಲಿ ನಾಚ್ಚಿಯಾರ್ ಅತಿಚೆಲುವೆ. ಅಂದು ಪಾರ್ವತಿದೇವಿ ಪಕ್ಕದಲ್ಲಿ ತಾನು ಕಂಡ ಎರಡನೇಯ ಪರಿಚಾರಿಕೆಯೇ ಈ ಸುಂದರಿ ಎಂದು ಸುಂದರ ನಾಯನಾರ್ ಅರಿತ. ಒಂದು ಬಿಲ್ವವೃಕ್ಷದಡಿ ಈಕೆಯನ್ನು ಸುಂದರರ್ ವಿವಾಹವಾದ. "ಎಂದೂ ನನ್ನನ್ನು ಬಿಡುವುದಿಲ್ಲ" ಎಂದು ಆತನ




ಹತ್ತಿರ ವಚನ ತೆಗೆದುಕೊಳ್ಳುವಂತೆ ಪರಮೇಶ್ವರನು ಆಕೆಯನ್ನು ಪುಸಲಾಯಿಸಿದ. ಹಾಗೇಯೇ ಆಕೆ ಮದುವೆಗೆ ಮೊದಲು ವಾಗ್ದಾನ ಪಡೆದಳು. ಅವಸರವಾಗಿ ಮಾತೇನೋ ಕೊಟ್ಟ. ಆದರೆ ಆಮೇಲೆ ಸುಂದರರ್ ತುಂಬಾ ಪೇಚಾಟಕ್ಕೆ ಸಿಲುಕಿದ.

'ಅಯ್ಯೋ, ಇಲ್ಲಿಂದ ಕದಲುವುದಿಲ್ಲವೆಂದು ಮಾತುಕೊಟ್ಟೆನಲ್ಲಾ. ಮತ್ತೆ ಮಿಕ್ಕ ಶೈವ ಕ್ಷೇತ್ರಗಳನ್ನು ಹೇಗೆ ಸಂದರ್ಶಿಸಲಿ?' ಎಂದು ಕೊಂಡು ಪರಶಿವನಲ್ಲಿ ಹೀಗೆ ಮೊರೆಯಿಟ್ಟ "ಸ್ವಾಮಿ, ನಾನು ಆತುರಬದ್ಧಿಯಿಂದ ಈಕೆಗೆ ಮಾತು ಕೊಟ್ಟೆನಾದಕಾರಣ ಇಲ್ಲಿಂದ ಕದಲುವಂತಿಲ್ಲ. ಆದುದರಿಂದ ನೀನೇ ಈ ವೃಕ್ಷದಲ್ಲಿ ಶಾಶ್ವತವಾಗಿ ನೆಲೆಸಿಬಿಡು"

ಸಂಗಲಿನಾಚ್ಚಿಯಾರ್ ಹತ್ತಿರ ಕೆಲವು ದಿನಗಳಿದ್ದ. ಸುಂದರರ್‌ಗೆ ಮತ್ತೆ ಉಳಿದ ಕ್ಷೇತ್ರಗಳನ್ನು ಸಂದರ್ಶಿಸಬೇಕೆಂಬ ಹಂಬಲ ವುಂಟಾಯಿತು. ಮಾತು ಅತಿಕ್ರಮಿಸುತ್ತಿರುವ ವಿಷಯ ತಿಳಿದೇ ತಿರುವತ್ತಿಯೂರ್ ದಾಟಿ ಬೇರೊಂದು ಕ್ಷೇತ್ರಕ್ಕೆ ಹೋಗಲು ಸಿದ್ಧವಾದ. ಆವರೆ ಸುಂದರರ್ ಆ ಊರಿನ ಗಡಿದಾಟಿದ ಕೂಡಲೆ ಆತನು ಸಂಪೂರ್ಣ ಕುರುಡನಾದ. ಅಂಥನಾದರೂ ಸಹ ಸುಂದರರ್ ಭಕ್ತಿಯನ್ನು ಬಿಡದೆ ಪರಮೇಶ್ವರನನ್ನು ಕುರಿತು ಭಕ್ತಿಪೂರಿತವಾದ ಶ್ಲೋಕಗಳನ್ನು ಹೇಳುತ್ತಾ ಅನೇಕ ಕ್ಷೇತ್ರಗಳಿಗೆ ಭೇಟಿಕೊಟ್ಟ.

ಆತನು ದೃಷ್ಟಿ ಕಳೆದುಕೊಂಡರೂ ಪರ್ಯಟನೆ ನಿಲ್ಲಿಸದೆ, ಕೈಯಲ್ಲಿ ಕೋಲು ಹಿಡಿದು ತಡವರಿಸಿಕೊಂಡು ಕಂಚಿಗೆ ಹೋಗುವ ವೇಳೆಗೆ ಎಡಗಣ್ಣು ಕಾಣಿಸಲು ಪ್ರಾರಂಭವಾಯಿತು. ತಿರುವಾರೂರು ಸೇರಿಕೊಳ್ಳುವ ಹೊತ್ತಿಗೆ ಮತ್ತೆ ಆತನಿಗೆ ಪೂರ್ತಿ ದೃಷ್ಟಿ ಲಾಭವಾಯಿತು.

ಇಷ್ಟರೊಳಗೆ ಮೊದಲನೇ ಮಡದಿಯಾದ ಪರವೈನಾಚ್ಚಿಯಾರಿಗೆ ಈತನು ಎರಡನೇ ಮದುವೆಮಾಡಿಕೊಂಡ ವಿಷಯ ತಿಳಿಯಿತು. ಆಕೆ ಕುಪಿತಗೊಂಡು ಸುಂದರರನ್ನು ಮನೆಯಲ್ಲಿ ಕಾಲಿಡಬೇಡವೆಂದಳು. ಆಗ ಸುಂದರರ್ ತನ್ನ ಇಷ್ಟದೈವವನ್ನು ಪ್ರಾರ್ಥಿಸಲು, ಪರಮೇಶ್ವರನು ಪ್ರತ್ಯಕ್ಷನಾಗಿ ಈರ್ವರಿಗೂ ಮತ್ತೆ ಗೆಳೆತನ ಬೆಳೆಯಿಸಿದನಂತೆ!

ಈ ವಿಷಯ ತಿಳಿದು ಕಲಿಕ್ಕಾಮನಾಯನಾರ್ ಎಂಬ ಭಕ್ತನು ಉಗ್ರನಾಗಿ ಸುಂದರರ್ ಹತ್ತಿರ ಬಂದು "ಎಲವೋ ನಿನಗೆಷ್ಟು ಸೊಕ್ಕು? ಪರಮೇಶ್ವರನನ್ನು ವಶಮಾಡಿಕೊಂಡು ನಿನ್ನ ಸಂಸಾರ ವಿಷಯಗಳಲ್ಲಿ ದೂತನಾಗಿ ಉಪಯೋಗಿಸುವೆಯಾ?" ಎಂದು ತೆಗಳಲು ಪ್ರಾರಂಭಿಸಿದನು.

ತನ್ನ ಭಕ್ತರಿಬ್ಬರೂ ಈ ರೀತಿ ಹೊಡೆದಾಟವಾಡುವುದು ಪರಮೇಶ್ವರನಿಗೆ ಸರಿತೋರಲಿಲ್ಲ. ಆತನು ಒಂದು ಯುಕ್ತಿ ಹೂಡಿದ. ದೇವರ ಮಹಿಮೆಯಿಂದ ಕಲಿಕ್ಕಾಮನಾಯನಾರಿಗೆ ಹೊಟ್ಟೆನೋವುಂಟಾಯಿತು. ಅದನ್ನು ಗುಣಪಡಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ.

ಕೊನೆಗೆ ಪರಮಾತ್ಮನು ಆತನಿಗೆ ಕನಸಿನಲ್ಲಿ ಕಾಣಿಸಿಕೊಂಡು "ಎಲೈ ನಾಯನಾರ್, ನಿನ್ನ ಬಾಧೆ ಗುಣಪಡಿಸಲು ಸುಂದರರ್ ಒಬ್ಬನೇ ಸಮರ್ಥ" ಎಂದು ಹೇಳಿದ.

ಆದರೆ ಕಲಿಕ್ಕಾಮನಾಯನಾರ್‌ಗೆ ಸುಂದರರ್ ಅನ್ನು ಆಶ್ರಯಿಸುವುದು ತೀರ ಅವಮಾನಕರವಾಗಿ ತೋರಿತು. ಏನಾದರಾಗಲೀ ಈ ಬಾಧೆಯಿಂದ ವಿಮುಕ್ತನಾಗಬೇಕೆಂದು, ವಿರಕ್ತನಾಗಿ ಕತ್ತಿಯಿಂದ ತನ್ನ ಕರುಳು ಕತ್ತರಿಸಿಕೊಂಡು ಪ್ರಾಣಬಿಟ್ಟ.

ಈ ಸುದ್ಧಿ ಕಿವಿಗೆಬಿದ್ದ ಕೂಡಲೇ ಸುಂದರರ್ ತುಂಬಾ ವ್ಯಾಕುಲನಾಗಿ ಪ್ರಾಣತ್ಯಾಗ ಮಾಡಿಕೊಳ್ಳಲು ಸಿದ್ಧನಾದ. ಆ ಕ್ಷಣವೇ ಪರಮೇಶ್ವರನು ಪ್ರತ್ಯಕ್ಷನಾಗಿ ಕಲಿಕ್ಕಾಮನಾಯನಾರನ್ನು ಬದುಕಿಸಿ "ಭಕ್ತರೇ! ನೀವಿಬ್ಬರೂ ನನಗೆ ಸರಿಸಮಾನರು. ನಿಮ್ಮ ನಿಮ್ಮಲ್ಲಿ ಹೊಡೆದಾಡಿಕೊಳ್ಳಬೇಡಿರಿ ಸ್ನೇಹದಿಂದಿರಿ" ಎಂದು ಹಿತಬೋಧೆ ಮಾಡಿ ಅದೃಶ್ಯನಾದ.

ತರುವಾಯ ಸುಂದರರ್ ಅನೇಕ ಇತರ ಕ್ಷೇತ್ರಗಳನ್ನು ಸಂದರ್ಶಿಸಿ, ಪರಮೇಶ್ವರನನ್ನು ಪ್ರಾರ್ಥಿಸಲು ಐರಾವತವು ಭೂಲೋಕಕ್ಕೆ ಇಳಿದು ಬಂದಿತು. ಸುಂದರರ್ ಅದರಮೇಲ ಹತ್ತಿ ಕುಳಿತುಕೊಂಡ. ಕೂಡಲೇ ಅದು ಹಾರಿಹೋಗಿ ಆತನನ್ನು ಕೈಲಾಸದಲ್ಲಿದ್ದ ಈಶ್ವರನಸಾನಿಧ್ಯದಲ್ಲಿ ಸೇರಿಸಿತು.



# ಕಾಗದದ ಪಾತ್ರೆಯಿಂದ ನೀರು ಕಾಯಿಸುವುದು

**ಸಾ**ಧಾರಣವಾಗಿ ನಾವು ಬರೆಯುವ ಕಾಗದದಲ್ಲಿ ದೊನ್ನೆಯೊಂದನ್ನು ತಯಾರು ಮಾಡಿ ಅದರಲ್ಲಿ ನೀರು ಕಾಯಿಸಬಹುದು.

ಇದನ್ನು ಕೇಳಿ ನಿನಗೆ ಆಶ್ಚರ್ಯವಾಗಬಹುದು. ಆದರೆ ಇದನ್ನು ಮಾಡುವುದುಮಾತ್ರ ತುಂಬಾ ಸುಲಭ. ಕಾಗದದಲ್ಲಿ ಪಾತ್ರಮಾಡುವುದುಂಟೇ ಎಂದು ನೀವು ಮೂಗಿನಮೇಲೆ ಬೆರಳಿಟ್ಟುಕೊಳ್ಳಬಹುದು.



ಕಾಗದದಲ್ಲಿ ಪಾತ್ರಮಾಡುವ ವಿಧಾನವಿದು: ಸಾಧಾರಣವಾದ ಕಾಗದವನ್ನು ತೆಗೆದುಕೊಂಡು ಅದನ್ನು ಪಕ್ಕದ ಚಿತ್ರದಲ್ಲಿ ತೋರಿಸಿರುವಂತೆ ಚದುರವಾಗಿಯಾಗಲೀ, ಉದ್ದವಾಗಿಯಾಗಲೀ, ನಾಲ್ಕು ಕಡೆಯನ್ನೂ ಮತ್ತು ತಳಭಾಗವನ್ನೂ ಆ ಆಕಾರ ಬರುವಂತೆ ಮಡಿಸು. ಮಡಿಕೆಗಳು ಕಿತ್ತುಹೋಗದಂತೆ ಎರಡು ಕಡೆಗೂ ಎರಡು ಗುಂಡುಸೂಜಿಗಳಗನ್ನು ಚಿತ್ರದಲ್ಲಿ ತೋರಿಸಿರುವ ರೀತಿ ಚುಚ್ಚು.

ಈಗ ಒಂದು ಪೆಟ್ಟಿಗೆಯ ಆಕಾರದಲ್ಲಿ ತಯಾರಾದ ಕಾಗದ ದೊನ್ನೆಯನ್ನು ಕೈಯಲ್ಲಿ ಹಿಡಿ.

ಈಗ ಎರಡುಕಡೆ ಇರುವ ಗುಂಡುಸೂಜಿಗಳಿಗೆ ಎರಡು ದಾರದ ಕೊನೆಗಳನ್ನು ಕಟ್ಟಿ ಈ ದೊನ್ನೆಯನ್ನು ತೂಗಹಾಕು. ಇಲ್ಲ ನಿನ್ನ ಕೈಯಲ್ಲಿ ಸಾಧ್ಯವಾಗುವ ಹಾಗಿದ್ದರೆ ನಿನ್ನ ಕೈ ಸುಡದಂತೆ ಹಿಡಿದುಕೊಂಡಿದ್ದರೂ ಸರಿ.

ಸರಾಸರಿ ಅದರ ತುಂಬ ಮೆಲ್ಲಗೆ ತುಳಕದಂತೆ ತಣ್ಣೀರುಸುರಿ. ನೀರಿನಲ್ಲಿ ತುಂಬಿದ ಈ ದೊನ್ನೆಯನ್ನು ಬೆಂಕಿಯ ಮೇಲಿಡು.



ಬೆಂಕಿ ತಾಕಿದ ಕೂಡಲೇ ಕಾಗದ ಸುಟ್ಟುಹೋಗಬಹುದೆಂದು ನೀನು ಭಯಪಡಬಹುದು. ಆದರೆ ಭಯಪಡಬೇಕಾದ ಅಗತ್ಯವೇನಿಲ್ಲ. ಕಾಗದ ಸುಡುವುದಿಲ್ಲ. ಆದರೆ ದೊನ್ನೆಯಲ್ಲಿರುವ ನೀರು ಕ್ರಮೇಣ ಬಿಸಿಯಾಗಿ ತುಸ ಹೊತ್ತಿಗೆಲ್ಲಾ ಕತಕತ ಕುದಿಯುವುದು.

ನೀನು ಇದನ್ನು ಮಾಡುವುದನ್ನು ನೋಡಿ, ನಿನ್ನ ಗೆಳೆಯರು ಆಶ್ಚರ್ಯ ಪಡುತ್ತಾರೆ.




ಬಹಳ ಕಾಲದ ಹಿಂದೆ ಒಂದೂರಿನಲ್ಲಿ ಶಿಲಾಮುಖನೆಂಬ ಸಾಹುಕಾರನಿದ್ದ. ಆತನಿಗೆ ನಗದು ಹಣವಷ್ಟೇ ಅಲ್ಲ, ಸಮಸ್ತವಾದ ಫಲವೃಕ್ಷಗಳಿಂದ ಕೂಡಿದ ದೊಡ್ಡದೊಂದು ತೋಪು ಇತ್ತು. ಆ ಭಾರೀ ತೋಪಿನ ಒಂದುಮೂಲೆಯಲ್ಲಿ ಗುಡಿಸಲನ್ನು ಹಾಕಿಕೊಂಡು ಅದರಲ್ಲಿ ಆತನು ವಾಸಿಸುತ್ತಿದ್ದ.

ಶಿಲಾಮುಖನು ಕಡು ಲೋಭಿ. ತೋಟದಲ್ಲಿ ಬೆಳೆಯುವ ಹಣ್ಣುಗಳನ್ನು ಆತನು ತಿನ್ನುತ್ತಿರಲಿಲ್ಲ. ಒಂದು ಫಲವನ್ನಾದರೂ ಇತರರಿಗೆ ಧರ್ಮ ಮಾಡುವವನಲ್ಲ.

ಒಂದು ಸಾರಿ ಮಾವಿನ ಕಾಯಿಗಳನ್ನು ಕೀಳಲು ಕೂಲಿಯವರನ್ನು ನೇಮಿಸಿದ ಶಿಲಾಮುಖ. ಗೊಂಚಲುಗೊಂಚಲಾಗಿ ನೇತಾಡುತ್ತಿದ್ದ ಮಾವಿನ ಕಾಯಿಗಳನ್ನು ಕಿತ್ತು ಬುಟ್ಟಿಗಳಲ್ಲಿ ತುಂಬುತ್ತಿದ್ದರು.

ಕೂಲಿಯವರು ಕಿತ್ತು ಹಾಕುತ್ತಿದ್ದ ಪ್ರತಿ ಕಾಯಿಯನ್ನೂ ಶಿಲಾಮುಖ ಲೆಕ್ಕ ಮಾಡುತ್ತ 'ನಾಲ್ಕಾಣೆ, ಎಂಟಾಣೆ, ಹನ್ನೆರಡಾಣೆ' ಎಂದು ಬೆಲೆಕಟ್ಟಿ ಗುಣಿಸುತ್ತಿದ್ದಾನೆ! ಅಷ್ಟರಲ್ಲಿ ಒಬ್ಬ ಕೂಲಿಯವನು ಬಾಯಿ ಚಪಲದಿಂದ ಒಂದು ಮಾವಿನ ಕಾಯಿಯನ್ನು ತಿನ್ನತೊಡಗಿದ. ಅವನನ್ನು ನೋಡಿ ಶಿಲಾಮುಖ "ಅಪ್ಪಾ, ಆ ಕಾಯಿಯ ಕ್ರಯ ಒಂದು ರೂಪಾಯಿ. ನಿನ್ನ ಕೂಲಿ ಅರ್ಧ ರೂಪಾಯಿ. ನಾಳೆ ನೀನು ಬಂದು ಕೆಲಸ ಮಾಡಿದರೆ ನೀನು ಕೊಡಬೇಕಾದ ಬಾಕಿ ತೀರುತ್ತದೆ" ಎಂದ.

ಕೂಲಿಯವನು ಬೆರಗಾದ. ಬೆಳಗಿನಿಂದ ಕಾಯಿಗಳು ಕಿತ್ತು, ಏನೋ ನಾಲಗೆ ಚಪಲದಿಂದ ಒಂದು ಕಾಯಿ ಕಚ್ಚಿದರೆ ಕ್ರಯ ಒಂದು ರೂಪಾಯಿ ಅಂತಾನಲ್ಲಾ ಎಂದು ಆತನಿಗೆ ಕೋಪ ಬಂತು.

ಶಿಲಾಮುಖ, ಕೂಲಿಯವರಲ್ಲಿ ಮಾತಿಗೆ ಮಾತು ಬೆಳೆಯಿತು. ನಾನಾ ಮಾತು ಆಡಿಕೊಂಡರು. ಹಾಗೆ ಮಾತು ಬೆಳೆದು ಕೈಗೆ ಕೈ ಹತ್ತಿತು. ಕೂಲಿಯವನು ಕುಪಿತನಾಗಿ ಶಿಲಾಮುಖನಿಗೆ ನಾಲ್ಕೇಟು ಕೊಟ್ಟ. ಏಟು ತಿಂದ ಶಿಲಾಮುಖನು ಉಗ್ರನಾಗಿ, ಅಂದಿನಿಂದ

ಜಿ. ರಾಮಮೂರ್ತಿ, ಚೆನ್ನಪಟ್ಟಣ




ತಿಳಿಗೇಡಿ ಎಂದು ತಿಳಿದಿರುವೆಯಾ? ಈ ಕೂಲಿಯವರನ್ನು ನಂಬಲೇಕೂಡದು. ಕಾಯಿ ಕೀಳಿರೋ ಎಂದರೆ ಕೆಲವನ್ನು ಕಿತ್ತು ಕೆಲ ವನ್ನು ತಿಂದುಬಿಡುತ್ತಾರೆ. ಹೋಗಲಿ, ಅವಕ್ಕೆ ಹಣ ಕೊಡ್ರೋ ಎಂದರೆ ಮೇಲೆ ಬೀಳುತ್ತಾರೆ. ಏಕಪ್ಪಾ ಈ ತಂಟೆ" ಎಂದು ಹೇಳುವನು.

ಒಂದು ದಿನ ಶಿಲಾಮುಖ ತೋಟದಲ್ಲಿ ಸುತ್ತಿಕೊಂಡು ಬರ್ರೋಣವೆಂದು ಹೊರಟ. ತೋಟದಲ್ಲಿ ಎಷ್ಟು ಮರಗಳಿವೆ? ಯಾರ ಮರದಲ್ಲಿ ಎಷ್ಟು ಕಾಯಿಗಳು ಬಿಟ್ಟಿವೆ? ಎಷ್ಟು ಉದುರಿವೆ? ಯಾವ ಯಾವ ಕೊಂಬೆ ಯಲ್ಲಿ ಎಷ್ಟೆಷ್ಟು ನೇತಾಡುತ್ತಿವೆ? ಎಂದು ಲೆಕ್ಕಹಾಕುತ್ತಾ ಬಂದ.

ಹಾಗೇ ತೋಟದಲ್ಲಿ ಹೋಗುತ್ತಿದ್ದಾಗ ಶಿಲಾಮುಖನಿಗೆ ಒಂದು ಮಾವಿನ ಮರದ ಕೊಂಬೆಯ ಮೇಲೆ ಮೃದುಮಧುರವಾಗಿ ಹಾಡುತ್ತಿದ್ದ ಒಂದು ಸುಂದರವಾದ ಪಕ್ಷಿ ಕಾಣಿಸಿತು. ಅದು ಗುಬ್ಬಚ್ಚಿಯಷ್ಟೇ ಚಿಕ್ಕದು. ಕಾಮನ ಬಿಲ್ಲಿನಲ್ಲಿ ಕಾಣುವ ಎಲ್ಲ ಬಣ್ಣಗಳೂ ಅದರ ಬಾಲದಲ್ಲಿತ್ತು. ಆ ಪಕ್ಷಿ ಹಾಡುತ್ತಿದ್ದುದಾದರೆ ಮರದ ಮೋಟೂಸಹ ಚಿಗುರು ವಂತೆ ತೋರುತ್ತಿದೆ.

ಆ ಮಂಜುಳ ಸ್ವರಕ್ಕೆ ಮಾರುಹೋದ ಶಿಲಾಮುಖ. ಮೆಲ್ಲನೆ ಹಿಂದು ಗಡೆಯಿಂದ ಹೋಗಿ ಆ ಪಕ್ಷಿಯನ್ನು ಹಿಡಿದುಕೊಂಡ. ಆ ಪಕ್ಷಿ ವಿಲವಿಲ ಒದ್ದಾಡಲಿಲ್ಲ. ಕೋಪದಿಂದ ಆತನನ್ನು ಕೊಕ್ಕಿನಿಂದ ಚುಚ್ಚಲಿಲ್ಲ!

ತೋಟದಲ್ಲಿ ಕಾಯಿಗಳನ್ನು ಕೀಳಗೊಡದೆ ಹಾಗೇ ಬಿಟ್ಟುಬಿಟ್ಟ.

ಆದರೆ ಆ ಹಣ್ಣುಗಳನ್ನು ನೋಡಿದರೆ ಆತನ ಬಾಯಿಯಲ್ಲಿ ನೀರೂರುತ್ತಿತ್ತು. ಕೂಡಲೇ ಅವನು ಈ ರೀತಿ ಅಂದುಕೊಳ್ಳುವನು: "ಏನಿಲ್ಲಾ ಅಂದರೂ ಒಂದು ಹಣ್ಣಿನ ಬೆಲೆ ನಾಲ್ಕಾಣೆ ಆಗುವುದು. ಅಷ್ಟು ಬೆಲೆ ಬಾಳುವ ಹಣ್ಣು ತಿಂದರೆ ಅಷ್ಟು ಹಣ ನನಗೆತಾನೇ ನಷ್ಟ" ಕಾಲ ಹೀಗೇ ಕಳೆಯುತ್ತಿತ್ತು. ವಿವಿಧ ವಾದ ಹಣ್ಣುಗಳು ಪಕ್ವವಾಗಿ, ಕೆಳಗೆ ಉದುರಿ ಹೋಗುತ್ತಿದ್ದುವು. ಶಿಲಾಮುಖ ಅವನ್ನು ನೋಡುತ್ತಾ ಸುಮ್ಮನಿರುತ್ತಿದ್ದ. ಯಾರಾ ದರೂ "ಏನಯ್ಯಾ ಆ ತೋಟ ಹಾಗೆ ಹಾಳು ಬಿಟ್ಟಿರುವೆ?" ಎಂದು ಕೇಳಿದರೆ, "ನಾನೇನು



"ಶಿಲಾಮುಖ ನೀನು ನನ್ನನ್ನು ಬಿಟ್ಟು ಬಿಟ್ಟಪಕ್ಷಕ್ಕೆ ನಿನಗೆ ಲಾಭವಾಗುವಂತಹ ಮೂರು ದಿವ್ಯ ಸೂಕ್ತಿಗಳನ್ನು ತಿಳಿಸುವೆನು" ಎಂದಿತು ಆ ಪಕ್ಷಿ.

ಪಕ್ಷಿಯ ಬಾಯಿಂದ ಈ ರೀತಿ ಮಾನವ ಭಾಷೆ ಹೊರಬಿದ್ದ ಕೂಡಲೇ ಶಿಲಾಮುಖ ಗಾಬರಿಗೊಂಡ.

"ನಿಜವಾಗಿ ಲಾಭವಾಗುವ ಸೂಕ್ತಿಗಳನ್ನು ತಿಳಿಸುವೆಯಾ?" ಎಂದು ಪ್ರಶ್ನೆ ಮಾಡಿದ. 'ಲಾಭ' ಎಂಬ ಮಾತು ಕೇಳಿದ ಕೂಡಲೇ ಆತನ ಬುದ್ಧಿ ಹಣದಕಡೆ ಹರಿಯಿತು. ಹೆಚ್ಚು ಹಣ ಬರುವ ಉಪಾಯ ಹೇಳಬಹುದೆಂದುಕೊಂಡ.




"ಹೌದು, ನಿಜವಾಗಿ ಲಾಭವಾಗುವ ಸೂಕ್ತಿಗಳನ್ನು ಹೇಳುತ್ತೇನೆ" ಎಂದಿತು ಪಕ್ಷಿ.

ಮರುಮಾತನಾಡದೆ ಶಿಲಾಮುಖನು ಆ ಪಕ್ಷಿಯನ್ನು ತನ್ನ ಹಿಡಿತದಿಂದ ಬಿಟ್ಟ. ಅದು ಕೂಡಲೇ ಹಾರಿಹೋಯಿತು. 'ಲಾಭ'ವೆಂಬ ಮಾತು ಕಿವಿಗೆ ಬಿದ್ದಕೂಡಲೇ ಆತನಿಗಿದ್ದ ತುಸ ಬುದ್ಧಿಯೂ ಮಂದವಾಯಿತು.

ಆ ಪಕ್ಷಿ ರಿವ್ವನೆ ಹಾರಿಹೋಗಿ, ಸಮೀಪದಲ್ಲಿದ್ದ ಒಂದು ರೆಂಬೆಯಮೇಲೆ ಹೋಗಿ ಕುಳಿತುಕೊಂಡಿತು. ಶಿಲಾಮುಖ ಬಾಯಿ ತೆರೆದುಕೊಂಡು ಏನು ಹೇಳುವುದೋ ಎಂದು ಅದರಕಡೆಯೇ ನೋಡುತ್ತಿದ್ದ.

"ಇದೋ ನಾನು ಹೇಳುತ್ತಿರುವೆನೆಂದ ಸೂಕ್ತಿಗಳಲ್ಲಿ ಮೊದಲನೇಯದು. ಇಲ್ಲದಿರುವುದಕ್ಕೆ ಚಿಂತಿಸಬೇಡ" ಎಂದಿತು ಪಕ್ಷಿ.

"ಓಸ್, ನನಗಿಷ್ಟುಮಾತ್ರ ತಿಳಿಯದೆ? ನಾನು ಸಣ್ಣವನಾಗಿದ್ದಾಗ ಇಂತಹ ನೀತಿಗಳನ್ನು ಕಲಿತೆ. ನಿನ್ನ ಹುಚ್ಚು ಮಾತುಗಳನ್ನು ಕೇಳುವಷ್ಟು ತಿಳಿಗೇಡಿ ನಾನಲ್ಲ" ಎಂದ ಶಿಲಾಮುಖ ಕೋಪದಿಂದ.

"ಶಿಲಾಮುಖ, ನೀನು ನಿಜವಾಗಿ ತಿಳಿಗೇಡಿಯೇ ಸರಿ. ಅಷ್ಟಲ್ಲದಿದ್ದರೆ ಅಷ್ಟುಹೊತ್ತು ನನ್ನನ್ನು ನಿನ್ನ ಭದ್ರಮುಷ್ಟಿಯಲ್ಲಿ ಹಿಡಿದಿದ್ದರೂ ಸಹ ನನ್ನ ಶರೀರದಲ್ಲಿ ಒಂದು ಮಣ ಬಂಗಾರವಿರುವ ವಿಷಯ ಗ್ರಹಿಸಲಿಲ್ಲ" ಎಂದಿತು ಪಕ್ಷಿ.

"ಒಂದು ಮಣ ಬಂಗಾರ! ಒಂದು ಮಣ!! ಅಯ್ಯೋ ನಿನ್ನನ್ನು ಬಿಟ್ಟುಬಿಟ್ಟು

ಎಷ್ಟು ನಷ್ಟ ಹೊಂದಿದೆ?" ಎಂದು ಚಿಂತಿಸಿದ ಶಿಲಾಮುಖ.

ಇದಕ್ಕೆ ಪಕ್ಷಿ ಪಕಪಕನೆ ನಕ್ಕು, ರೆಕ್ಕೆಗಳನ್ನು ಪಟಪಟ ಬಡಿದು, "ಶಿಲಾಮುಖ, ನೀನು ತಿಳಿಗೇಡಿ. ತಿಳಿಗೇಡಿಗಳಲ್ಲಿ ಅಗ್ರಗಣ್ಯ. ಗುಬ್ಬಚ್ಚಿ ಗಾತ್ರವಿರುವ ನನ್ನಲ್ಲಿ ಮಣ ಭಾರವಿರುವ ಬಂಗಾರವಿದೆ ಎಂದರೆ ಹೇಗೆ ತಾನೇ ನಂಬಿದೆ? ಎಂತಹ ಹುಚ್ಚ ನೀನು!!" ಎಂದಿತು.

ಶಿಲಾಮುಖ ಹಲ್ಲುಕಚ್ಚಿ, ಕಣ್ಣು ಅರಳಿಸಿದ. ಆಗ ಪಕ್ಷಿ ಆತನೊಂದಿಗೆ ಹೀಗೆಂದಿತು :

"ಇನ್ನು ಎರಡನೇ ಸೂಕ್ತಿ ಕೇಳು. ಇತರರು ಹೇಳಿದ್ದೆಲ್ಲಾ ನಿಜವೆಂದು ತಿಳಿಯಬೇಡ"

"ಇದನ್ನು ನಾನು ಚಿಕ್ಕಂದಿನಲ್ಲಿ ಓದಿಕೊಂಡಿದ್ದೇನೆ. ಇದರಲ್ಲಿ ಹೊಸದೇನಿದೆ?" ಎಂದ ಶಿಲಾಮುಖ ಕಣ್ಣು ಕೆಂಪಗೆ ಮಾಡಿ.

"ಎಲ್ಲಾ ತಿಳಿದಿರುವುದೆಂದುಕೊಂಡಿರುವ ತಿಳಿಗೇಡಿ ನೀನು. ಇನ್ನು ಮೂರನೇ ಸೂಕ್ತಿ ಕೇಳು. ಕೈಗೆ ಸಿಕ್ಕಿದ ಲಕ್ಷ್ಮಿಯನ್ನು ಬಿಟ್ಟು ಬಿಟ್ಟು ಮರದ ಮೇಲೆ ಹುಡುಕಬೇಡ" ಎಂದಿತು ಪಕ್ಷಿ.

ಈ ಮಾತನ್ನು ಕೇಳಿ ಶಿಲಾಮುಖನು ತಲೆ ಚಚ್ಚಿಕೊಂಡು "ಹೌದು, ಹೌದು, ನಿಜವಾಗಿ ತಿಳಿಗೇಡಿ ನಾನು" ಎಂದು ಒಪ್ಪಿಕೊಂಡ.

ಆ ಸಮಯಕ್ಕೆ ಸರಿಯಾಗಿ ತೋಟದ ಮಧ್ಯದಲ್ಲಿ ಒಂದು ಬಿರುಗಾಳಿ ಎದ್ದಿತು. ಆ ಸುಳಿಗಾಳಿ ಬ್ರಹ್ಮಾಂಡವಾದ ಮರಗಳನ್ನೂ ಸಹ ಬುಡಸಮೇತ ಬೀಳಿಸಿತು. ಭಯದಿಂದ ಕಣ್ಣು ಮುಚ್ಚಿಕೊಂಡ ಶಿಲಾಮುಖ. ಕಣ್ಣು ತೆರೆದು ನೋಡಿದರೆ ಏನಿದೆ? ತೋಟದಲ್ಲಿದ್ದ ಮರಗಿಡಗಳೆಲ್ಲಾ ಬಿದ್ದುಹೋಗಿವೆ. ಮರದ ಕೊಂಬೆಯ ಮೇಲಿದ್ದ ಹಕ್ಕಿ ಮಾಯವಾಗಿದೆ. ಆತನು ವಾಸಿಸುತ್ತಿದ್ದ ಗುಡಿಸಲಿನ ಮೇಲ್ಛಾವಣಿ ಹಾರಿಹೋಗಿ ಬರೀ ಗೋಡೆಗಳು ಕಾಣಿಸುತ್ತಿವೆ.

"ಲಕ್ಷ್ಮೀದೇವಿ ಸಕಲ ಸಂಪತ್ತನ್ನೂ ಕೊಟ್ಟಳು. ಆದರೇನು? ನಾನು ಅನುಭವಿಸಲಿಲ್ಲ. ಇತರರನ್ನೂ ಅನುಭವಿಸಲು ಬಿಡಲಿಲ್ಲ. ಕೊನೆಗೆ ಎಲ್ಲಾ ಮಣ್ಣುಪಾಲಾಯಿತು. ನಿಜವಾಗಿ ನಾನು ಮಂಕನೇಸರಿ" ಎಂದು ವಿಲಪಿಸಿದ ಶಿಲಾಮುಖ.



# ಮುಖಚಿತ್ರ

**ಭೀ**ಮಸೇನನು ಅರಗಿನ ಮನೆಯಿಂದ ತಪ್ಪಿಸಿಕೊಂಡು 'ಹಿಡಿಂಬವನ' ವನ್ನು ಸೇರಿದನಷ್ಟೆ? ತಾಯಿ ಕುಂತೀದೇವಿಯನ್ನೂ, ಧರ್ಮ, ಅರ್ಜುನ, ನಕುಲ, ಸಹದೇವರನ್ನೂ ಅಲ್ಲಿ ಮಲಗಿಸಿ ಭೀಮನು ಕಾವಲು ಕಾಯುತ್ತಿದ್ದನು. ಇನ್ನೂ ಬೆಳಕು ಹರಿದಿಲ್ಲ. ಆಗ—

ಆ ವನದೊಡೆಯ ಹಿಡಿಂಬಾಸುರನಿಗೆ ನರವಾಸನೆ ಬಂತು. ಅವನ ತಂಗಿಯಾದ ಹಿಡಿಂಬಿ "ನಾನು ನೋಡಿಕೊಂಡು ಬರುವೆನು" ಎಂದು ಹೇಳಿ ಹೊರಟಳು. ಅವಳು ದೂರದಿಂದಲೇ ದೃಢಕಾಯನಾದ ಭೀಮನನ್ನು ನೋಡಿದಳು. ಅವನ ಸುಂದರ ರೂಪವನ್ನು ನೋಡಿ, ಅವನನ್ನು ಮದುವೆ ಮಾಡಿಕೊಳ್ಳಬೇಕೆಂದು ಬಯಸಿಬಿಟ್ಟಳು. ಒಡನೆಯೇ ಅವಳು ದಿವ್ಯ ಸುಂದರಿಯ ರೂಪವನ್ನು ತಾಳಿ ಭೀಮನ ಬಳಿಗೆ ಬಂದು "ಯಾರು? ಏನು?" ಎಂದು ಮಾತಾಡಿಸಿ, ತನ್ನ ಅಭಿಲಾಷೆಯನ್ನು ತಿಳಿಸಿದಳು. ಭೀಮನು ತನ್ನ ತಾಯಿ — ಅಣ್ಣಂದಿರನ್ನು ಕೇಳದೆ ಮದುವೆಗೆ ಸಾಧ್ಯವಿಲ್ಲವೆಂದು ಹೇಳಿಬಿಟ್ಟನು.

ಅಷ್ಟರಲ್ಲಿ, ತಂಗಿ ಇನ್ನೂ ಬರಲಿಲ್ಲವೆಂದುಕೊಂಡು ಹಿಡಿಂಬನೇ ಅಲ್ಲಿಗೆ ಬಂದನು. ತನ್ನ ತಂಗಿ ಭೀಮನೊಂದಿಗೆ ಪ್ರೀತಿಯಾಗಿರುವುದನ್ನು ಕಂಡು ಅವನಿಗೆ ಕೋಪ ಬಂತು. ಸಿಟ್ಟಿನಿಂದ ಆರ್ಭಟಿಸಿಕೊಂಡು ಮುಂದೆ ಬಂದನು. "ನನ್ನ ಅಣ್ಣನು ಬಹಳ ಕೆಟ್ಟವ. ನೀನು ನನ್ನ ಹೆಗಲಮೇಲೆ ಹತ್ತು; ನಾವು ಸುರಕ್ಷಿತವಾದ ಸ್ಥಳಕ್ಕೆ ಹೋಗಿಬಿಡೋಣ" ಎಂದಳು ಹಿಡಿಂಬಿ. "ಅದೆಲ್ಲ ಏಕೆ? ಅವನನ್ನು ನಾನೇ ಕಳುಹಿಸಿಬಿಡುತ್ತೇನೆ" ಎಂದು ಹೇಳಿ ಭೀಮನು, ಹಿಡಿಂಬಾಸುರನನ್ನು ದರದರನೆ ದೂರ ಎಳೆದುಕೊಂಡು ಹೋದನು. ಮಲ್ಲಯುದ್ಧ ನಡೆಯಿತು. ಹಿಡಿಂಬಾಸುರನು ಸತ್ತನು. ಅಷ್ಟರಲ್ಲಿ ಬೆಳಗಾಗಿತ್ತು. ಕುಂತಿ, ಧರ್ಮರಾಯ ಮೊದಲಾದವರು ಎದ್ದು ಕೌತುಕದಿಂದ ನೋಡುತ್ತಿದ್ದರು.

ಕುಂತಿ "ಇದೆಲ್ಲಾ ಏನು?" ಎಂದು ಕೇಳಿದಳು. ಹಿಡಿಂಬಿಯೇ ನಡೆದ ಎಲ್ಲಾ ಸಮಾಚಾರವನ್ನೂ ಹೇಳಿದಳು. ಕೌರವರ ಅರಗಿನ ಮನೆ, ಅದರಲ್ಲಿ ಮಾಡಿದ ವಿದುರ - ಕನಕರ ತಂತ್ರ ಮುಂತಾದ ವೃತ್ತಾಂತವನ್ನೆಲ್ಲಾ ಅವಳು ಹೇಳಿದ್ದು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು. "ಇದು ನಿನಗೆ ಹೇಗೆ ತಿಳಿಯಿತು?" ಎಂದು ಧರ್ಮರಾಜನು ಕೇಳಿದನು. "ನಾನು ಭಗವಾನ್ ವ್ಯಾಸರ ಅನುಗ್ರಹದಿಂದ ಭೂತ ಭವಿಷ್ಯ ಜ್ಞಾನವನ್ನು ಪಡೆದಿದ್ದೇನೆ. ನನ್ನನ್ನು ಭೀಮಸೇನನು ವರಿಸುವಂತೆ ಮಾಡಬೇಕು" ಎನ್ನುತ್ತಾ ಅವಳು ಅವರ ಕಾಲುಗಳಿಗೆ ಎರಗಿದಳು.

ಆಗ ಅಲ್ಲಿ ವ್ಯಾಸರೇ ಪ್ರತ್ಯಕ್ಷರಾದರು. ಹಿಡಿಂಬಿಯ ಗುಣ ವಿಶೇಷಗಳನ್ನು ಅವರೇ ವಿವರಿಸಿದರು. ಅವಳು ಕಾಮರೂಪಧಾರಿಣಿಯಾದರೂ ರಾಕ್ಷಸ ಗುಣವುಳ್ಳವಳಲ್ಲ. ವಿನಯ, ವಿಧೇಯತೆಗಳಿಂದ ತುಂಬಿದವಳು, ಸುಗುಣೆ ಎಂದು ವ್ಯಾಸರು ತಿಳಿಸಿ, ಮದುವೆಗೆ ಅನುಮೋದನೆ ಯಿತ್ತರು. ನಂತರ ಭೀಮನೂ ಹಿಡಿಂಬಿಯೂ ಸ್ನಾನದಿಂದ ಶುಚಿರ್ಭೂತರಾಗಿ ಬಂದರು. ಭಗವಾನ್ ವ್ಯಾಸರ ಸನ್ನಿಧಿಯಲ್ಲಿಯೇ ಭೀಮ-ಹಿಡಿಂಬಿಯರ ವಿವಾಹವಾಯಿತು.



# ಕೃತಕ ಮುತ್ತಿಗೆ

ಕೆಲವು ನೂರುವರ್ಷಗಳ ಹಿಂದೆ ರಾಜಪುಟಾಣಾದಲ್ಲಿ ಅನೇಕ ಸಣ್ಣ ಸಣ್ಣ ಸಂಸ್ಥಾನಗಳಿದ್ದುವು. ಅವುಗಳಲ್ಲಿ ಮೇವಾಡ ಒಂದು ಸಂಸ್ಥಾನ. ಅದರ ಮುಖ್ಯಪಟ್ಟಣ ಚಿತ್ತೂರು. ಮೇವಾಡವನ್ನು ಪಾಲಿಸುವ ರಾಜರನ್ನು ರಾಣಾ ಎಂದು ಕರೆಯುತ್ತಿದ್ದರು. ಅವರಲ್ಲಿ ಒಬ್ಬ ರತ್ನರಾಣಾ.

ರತ್ನರಾಣಾನಿಗೆ ತನ್ನ ಪದವಿಯಿಂದ ತೃಪ್ತಿಯಾಗಲಿಲ್ಲ. ನೆರೆ ಹೊರೆಯ ರಾಜರನ್ನು ವಶಪಡಿಸಿಕೊಳ್ಳ ಬೇಕೆಂದೂ, ಅವರಿಂದ ಕಪ್ಪಕಾಣಿಕೆಗಳನ್ನು ವಸೂಲುಮಾಡಿ ಚಕ್ರವರ್ತಿ ಎಂಬ ಬಿರುದು ಪಡೆಯಬೇಕೆಂದೂ ಆತನ ಅಭೀಷ್ಟ. ಕೂಡಲೆ 'ನೀವೆಲ್ಲಾ ಬಂದು ನನ್ನ ಕಾಲಿಗೆರಗಿ ಕಪ್ಪಕಾಣಿಕೆಗಳನ್ನು ಸಲ್ಲಿಸಬೇಕು' ಎಂದು ಅವರಲ್ಲಿಗೆ ರಾಯಬಾರಿಗಳನ್ನು ಕಳುಹಿಸಿದ.

ಚಿತ್ತೂರಿಗೆ ಅರವತ್ತು ಮೈಲಿದೂರದಲ್ಲಿ ಬೂಂದೀಕೋಟೆ ಯೆಂಬ ಒಂದು ಕೋಟೆಯಿತ್ತು. ಬೂಂದೀಸಂಸ್ಥಾನದ ರಾಜ ಸುರಾಜಮಲ್ಲ. ಆತನು ಪರಾಕ್ರಮಶಾಲಿ. ಚಿತ್ತೂರಿನಿಂದ ಬಂದ ರಾಯಭಾರಿಯ ಮಾತುಗಳನ್ನು ಕೇಳಿ ಸುರಾಜಮಲ್ಲ ಕೋಪದಿಂದ ಕಿಡಿಕಿಡಿಯಾದ.

ರಾಯಭಾರಿ ಭಯದಿಂದ ತತ್ತರಿಸಿದ. ಹಿಂತಿರುಗಿನೋಡದೆ ವಾಪಸು ಹೋಗಿ ರತ್ನರಾಣಾನ ಹತ್ತಿರ ನಡೆದ ವಿಷಯವನ್ನೆಲ್ಲಾ ಮಣಿ ಪೋಣಿಸಿದಂತೆ ತಿಳಿಸಿದ.

ರಾಣಾ ಉರಿದುಬಿದ್ದ. ಬೂಂದೀ ಕೋಟೆಯಮೇಲೆ ದಂಡೆತ್ತಿ ಹೋಗಲು ಸೈನ್ಯ ಸಿದ್ಧಪಡಿಸಬೇಕೆಂದು ಆಜ್ಞೆಮಾಡಿದ.

"ಬೂಂದೀ ಸಂಸ್ಥಾನದ ರಾಜಶೂರ. ಆತನ ಸೈನ್ಯದಲ್ಲಿರುವ ಪ್ರತಿ ರಾಜಪುತ್ರನೂ ಪೌರುಷವಂತ. ಅಂತಹವನೊಂದಿಗೆ ಹಗೆತನ ಮಾಡುವುದು ಶ್ರೇಯಸ್ಕರವಲ್ಲ" ಎಂದು ಪರಿಪರಿ ವಿಧದಲ್ಲಿ ಸಂಸ್ಥಾನದ ಮಂತ್ರಿವರ್ಯರೂ, ಸೇನಾಧಿಪತಿಯೂ ರಾಣಾಗೆ ಹೇಳಿ ನೋಡಿದರು. ಆದರೆ ರಾಣಾ ಯಾರ ಮಾತನ್ನೂ ಕಿವಿಯಮೇಲೆ ಹಾಕಿಕೊಳ್ಳಲಿಲ್ಲ.

ಎ. ನರಸಿಂಹ, ಬೀರೂರು

ಎಲ್ಲರ ಸಲಹೆಗಳನ್ನೂ ತಿರಸ್ಕರಿಸಿ, ಸೈನ್ಯವನ್ನು ತೆಗೆದುಕೊಂಡು ಹೋಗಿ ಬೂಂದೀ ಕೋಟೆಗೆ ಮುತ್ತಿಗೆ ಹಾಕಿದ.

ರತ್ನರಾಣಾನ ಆಸ್ಥಾನದಲ್ಲಿ ಲಾಲಾಜಿ ಎಂಬ ರಾಜಪುತ್ರನಿದ್ದ. ಆತನ ಜನ್ಮಸ್ಥಳ ಬೂಂದೀ ಕೋಟೆ. ಬೂಂದೀ ರಾಜನಾದ ಸುರಾಜಮಲ್ಲನೊಂದಿಗೆ ನೆಂಟಸ್ತಿಕೆಯಿದೆ. ಆದರೆ ಯಾವುದೋ ಒಂದು ವಿಷಯದಲ್ಲಿ ಮಾತುಕತೆಯಾಗಿ, ಲಾಲಾಜಿ ತನ್ನ ಕೆಲವು ಸೈನಿಕರೊಂದಿಗೆ ಬೂಂದೀ ಕೋಟೆಯನ್ನು ತ್ಯಜಿಸಿ, ರಾಣಾನ ಆಸ್ಥಾನದಲ್ಲಿ ಸೇರಿಕೊಂಡಿದ್ದ.

ರಾಣಾ ಬೂಂದೀ ಕೋಟೆಯನ್ನು ಮುತ್ತಿಗೆ ಹಾಕಲು ಹೋದಾಗ ಲಾಲಾಜಿ ಚಿತ್ತೂರಿನಲ್ಲಿರಲಿಲ್ಲ. ಕೆಲವು ಸೈನಿಕರೊಂದಿಗೆ ಹೋಗಿ ಕಂದಾಯ ವಸೂಲು ಮಾಡಿಕೊಂಡು ಬರುವಂತೆ ರಾಣಾ ಆತನನ್ನು ಒಂದು ಗ್ರಾಮಕ್ಕೆ ಕಳುಹಿಸಿದ್ದ.

ಬೂಂದೀಕೋಟೆ ಸುನಾಯಾಸವಾಗಿ ವಶವಾಗುವುದೆಂದುಕೊಂಡಿದ್ದ ರತ್ನಾರಾಣಾ. ಆದರೆ ಬೂಂದೀ ರಾಜನಾದ ಸುರಾಜಮಲ್ಲ ಶೂರ ಹಾಗೂ ಬುದ್ಧಿವಂತ. ರತ್ನರಾಣಾ ತನ್ನ ಮೇಲೆ ದಂಡೆತ್ತಿ ಬರುವನೆಂಬ ವಿಷಯ ತಿಳಿದಕೂಡಲೇ ಚಕಚಕನೆಂದು ಅನೇಕ ಏರ್ಪಾಟುಗಳನ್ನು ಮಾಡಿದ. ರಾಜಕುಟುಂಬಕ್ಕೂ, ಪರಿವಾರಕ್ಕೂ ಒಂದುವರ್ಷಕ್ಕೆ ಸಾಕಾಗುವಷ್ಟು ಆಹಾರ ಸಾಮಗ್ರಿಗಳನ್ನು




ಕೋಟೆಯಲ್ಲಿ ತುಂಬಿಸಿ, ಬಾಗಿಲುಗಳನ್ನು ಬಧ್ರಪಡಿಸಿದ. ರತ್ನರಾಣಾ ಕೋಟೆಯ ಹೊರಗೆ ಬೀಡುಬಿಟ್ಟು, ಬೂಂದೀರಾಜನ ಮುಂಜಾಗ್ರತೆಯನ್ನು ನೋಡಿ ಆಲೋಚನಾಮಗ್ನನಾದ. ಆ ಎತ್ತರವಾದ ಕೋಟೆಗೋಡೆ, ಆಳವಾದ ಕಂದಕ ದಾಟಿಹೋಗಲು ಶ್ರಮದಾಯಕವಾದುದೆಂದು ತೋರಿತು.

ಹೀಗಿರಲು ಕೋಟೆಯಮೇಲಿಂದ ಬಾಣಗಳೂ, ಕಲ್ಲುಗಳೂ, ಚಳಚಳನೆ ಕಾದ ಎಣ್ಣೆಯೂ ಬಂದು ಬೀಳುತ್ತಿದ್ದುದರಿಂದ ಕೆಳಗೆ ಬೀಡು ಬಿಟ್ಟಿದ್ದ ರಾಣಾನ ಸೈನಿಕರಲ್ಲಿ ಹಲವರು ಮಡಿದರು.

ಆಗ ರಾಣಾ ಒಂದು ಪ್ರತಿಜ್ಞೆಮಾಡಿದ— ಬೂಂದೀಕೋಟೆ ವಶವಾಗಬೇಕು, ಆಗ



ನಾನು ಊಟಮಾಡಬೇಕು' ಎಂದು. ಆದರೆ ಪ್ರತಿಜ್ಞೆಮಾಡಿದ ಮಾತ್ರಕ್ಕೆ ಕೋಟೆ ವಶ ವಾಗುವುದೇ? ಪರಿಸ್ಥಿತಿಯಲ್ಲಿ ಯಾವುದೇ ವಿಧವಾದ ಬದಲಾವಣೆ ಕಾಣಿಸಲಿಲ್ಲ. ಕೋಟೆ ಆತನ ವಶವಾಗಲಿಲ್ಲ. ರಾಣಾ ಊಟಮಾಡ ಲಿಲ್ಲ. ಮಂತ್ರಿಗಳೂ, ಉನ್ನತಾಧಿಕಾರಿಗಳೂ ಬಂದು ರಾಣಾನನ್ನು ಊಟಮಾಡುವಂತೆ ಕೇಳಿಕೊಂಡರು. ಏನೇ ಮಾಡಿದರೂ ಆತ ತನ್ನ ಹಠಬಿಡಲಿಲ್ಲ.

ದಿನ ಕಳೆದಂತೆ ರಾಣಾನ ಶರೀರ ಕೃಶವಾಗು ತಿತ್ತು. ರಾಜ್ಯದಲ್ಲಿದ್ದ ಪ್ರತಿ ಪ್ರಜೆಗೂ "ನಮ್ಮ ರಾಣಾನನ್ನು ಹೇಗೆ ಸಮಾಧಾನಪಡಿಸು ವುದು? ಆತನನ್ನು ಉಳಿಸಿಕೊಳ್ಳುವ ಬಗೆ ಹೇಗೆ?" ಎಂಬ ಚಿಂತೆ ಹಿಡಿಯಿತು. ಈ ಸ್ಥಿತಿಯಲ್ಲಿರುವಾಗ ಮುಖ್ಯಮಂತ್ರಿಗೆ ಒಂದು ಯುಕ್ತಿ ಹೊಳೆಯಿತು! "ಪ್ರಭೂ, ತಾವು ಮಾತು ತಪ್ಪದ ಮಾನವರೆಂದು ಪ್ರಪಂಚಕ್ಕೆ ತಿಳಿದಿದೆ. ಈಗಲೂ ತಾವೇನೂ ಮಾತು ತಪ್ಪ ಬೇಕಾಗಿಲ್ಲ. ಅದಕ್ಕೊಂದು ಕೆಲಸಮಾಡೋಣ ನಾವು ತತ್‌ಕ್ಷಣ ಚಿತ್ತೂರು ನಗರಕ್ಕೆ ಹಿಂದಿ ರುಗಿ ಹೋಗಿ, ಅಂತಹದೇ ಒಂದು ಕೋಟೆ ಯನ್ನು ಅಲ್ಲಿ ಕಟ್ಟಿಸುವ. ಅದಕ್ಕೆ ಬೂಂದೀ ಕೋಟೆ ಎಂದು ಹೆಸರಿಡೋಣ. ಅದಕ್ಕೆ ಮುತ್ತಿಗೆ ಹಾಕಿ ನಮ್ಮ ವಶಪಡಿಸಿಕೊಳ್ಳೋಣ. ಹೀಗೆ ಮಾಡಿದ ಪಕ್ಷಕ್ಕೆ ಪ್ರಭುವರ್ಯರ ಪ್ರತಿಜ್ಞೆಗೆ ಭಂಗಬರಲಾರದು" ಎಂದ.

ಈ ಉಪಾಯ ರಾಣಾಗೆ ಹಿಡಿಸಿತು. ಮರು ಆಲೋಚನೆಯಿಲ್ಲದೆ ತನ್ನ ಸೈನ್ಯವನ್ನು ಹಿಂತಿರುಗುವಂತೆ ಆಜ್ಞೆ ಮಾಡಿದ.

ಎಲ್ಲರೂ ಚಿತ್ತೂರು ನಗರವನ್ನು ಸೇರಿ ಕೊಂಡರು. ಮುಖ್ಯಮಂತ್ರಿಯ ಸಲಹೆಯಂತೆ ಒಂದು ಸಣ್ಣ ಕೋಟೆ ಕಟ್ಟಿದರು. ಅದರ ಸಿಂಹ ದ್ವಾರದ ಮೇಲೆ ಬೂಂದೀ ಕೋಟೆ ಎಂಬ ಹೆಸರನ್ನು ಕೆತ್ತಿಸಿದರು. "ಒಂದು ರಾತ್ರಿ ಆ ಕೋಟೆಯ ಹೊರಗೆ ಬಿಡಾರ ಹಾಕಿ ಆ ಕೋಟೆಯನ್ನು ವಶಮಾಡಿಕೊಳ್ಳಿ" ಎಂದು ಮಂತ್ರಿ ಆಜ್ಞಾಪಿಸಿದ.

ಅಂದು ರಾತ್ರಿಯೇ ಲಾಲಾಜಿ ತನ್ನ ಕಾರ್ಯ ಮುಗಿಸಿಕೊಂಡು ಪರಿವಾರ ಸಮೇತನಾಗಿ ಚಿತ್ತೂರಿಗೆ ಹಿಂತಿರುಗಿದ. ಆತನಿಗೆ ಅಲ್ಲಿ ಒಂದು ಹೊಸದಾದ ಸಣ್ಣ ಕೋಟೆ ಕಾಣಿಸಿತು.




"ಇದೇನು ?" ಎಂದು ಒಬ್ಬಾತನನ್ನು ಕೇಳಿದ. ಆತನು ಸಮಸ್ತ ವಿಷಯವನ್ನು ವಿವರಿಸಿ ಹೇಳಲು "ಅಳುವ ಹಾಗೇ ಅದೆ, ರಾಣಾನ ಪರಿಪಾಲನೆ" ಎಂದ.

ಬೆಳಗಾದ ಕೂಡಲೇ ರಾಣಾನ ಸೇನಾಧಿಪತಿ ನಾಲ್ಕು ಆನೆಗಳನ್ನೂ, ಇಪ್ಪತ್ತೈದು ಕುದುರೆಗಳನ್ನೂ, ಕೆಲವು ಸೈನಿಕರನ್ನೂ ತೆಗೆದುಕೊಂಡು ಕೃತಕ ಬೂಂದೀ ಕೋಟೆಯನ್ನು ಮುತ್ತಿದಂತೆ ನಟಿಸಿ, ಅಟ್ಟಹಾಸದಿಂದ "ಕಂದಕವನ್ನು ದಾಟಿ, ಗೋಡೆ ಏರಿ" ಎಂದು ಕಿರಿಚುತ್ತ ಕೋಲಾಹಲ ಮಾಡುತ್ತಿದ್ದರು.

ಮಿತಿಮೀರಿದ ಉತ್ಸಾಹದಿಂದ ಸೈನಿಕರು "ರಾಜಾಧಿರಾಜನಿಗೆ ಜೈ, ರತ್ನರಾಣಾಗೆ ಜೈ" ಎಂದು ಜಯಜಯಾಕಾರಗಳನ್ನು ಮಾಡಿ, ಕೋಟೆಗೋಡೆಯನ್ನು ಹತ್ತಲು ಪ್ರಾರಂಭಿಸಿದರು.

ಆದರೆ ಅನಿರೀಕ್ಷಿತವಾಗಿ ಮೇಲಿಂದ ಬಾಣಗಳು ಬಂದು ಅನೇಕರಿಗೆ ಏಟುಬಿದ್ದು ಕಂದಕದಲ್ಲಿ ಬಿದ್ದರು.

"ಅರೆ, ಏನಿದು? ಒಳಗೆ ಯಾರಿರುವರು? ಕೃತಕ ಕೋಟೆ ಎಂದು ನಾವು ನೆನೆಸಿ ಬಂದರೆ ಅನೇಕರು ಸಾವಿಗೆ ತುತ್ತಾದರಲ್ಲಾ" ಎಂದು ಆಶ್ಚರ್ಯಪಟ್ಟ ರಾಣಾನ ಸೇನಾಧಿಪತಿ.

"ಬಾಗಿಲು ತೆಗೆಯಿರಿ. ಒಳಗೆ ಪ್ರವೇಶ ಮಾಡಿರಿ" ಎಂದು ತನ್ನ ಸೈನಿಕರಿಗೆ ಆಜ್ಞೆ ಮಾಡಿದ ಸೈನ್ಯಾಧಿಪತಿ. ಆಜ್ಞಾಪಿಸಿದ್ದೇನೋ ಉಂಟು, ಆದರೆ ಆ ಕೋಟೆ ಬಾಗಿಲು ತೆಗೆಯುವುದು ಬರೀ ಮಾತೇ? ಯಾರಿಂದ ಆಗುತ್ತೆ.

ಸತ್ತು ಸುಣ್ಣವಾಗಿ ಹೇಗೋ ಒಂದು ರೀತಿ ರಾಣಾ ಸೈನಿಕರು ಆ ಕೋಟೆ ಬಾಗಿಲುಗಳನ್ನು ತೆಗೆದರೂ ಯಾರೂ ಒಳಗೆ ಪ್ರವೇಶಿಸಲು ಸಾಧ್ಯವಾಗುವಂತಿಲ್ಲ. ಏಕೆಂದರೆ ನೂರು ಜನ ಸೈನಿಕರೊಂದಿಗೆ ಲಾಲಾಜಿ ಮಹಾ ದ್ವಾರದ ಹತ್ತಿರ ನಿಂತು ಅವರನ್ನು ಅಡ್ಡಗಟ್ಟುತ್ತಿದ್ದಾನೆ! ಲಾಲಾಜಿಯನ್ನು ಕಂಡ ಕೂಡಲೇ ರಾಣಾನ ಸೇನಾಧಿಪತಿ ಉರಿದುಬಿದ್ದು "ಏಯ್, ಕೋರಿ ಕೋರಿ ಮರಣವನ್ನು ತಂದುಕೊಳ್ಳುವೆಯಾ?" ಎಂದು ಎಚ್ಚರಿಸಿದ.

"ಸಾವೆಂದರೆ ಹೆದರುವ ರಾಣಾ ರವರ ಸೇನಾಧಿಪತಿಗೇ ಅಭಯ, ನಮಗಿಲ್ಲ" ಎಂದು ಲಾಲಾಜಿ ಧಿಮಾಕಿನಿಂದ ನುಡಿದು ಹೀಗೆಂದು

ಮುಂದುವರೆಸಿದ: "ಬೂಂದೀ ಕೋಟೆಯನ್ನು ವಶಮಾಡಿಕೊಳ್ಳಲು ಕಿಸಿಯದೆ ಹಿಂತಿರುಗಿ ಬಂದು ಬೊಂಬೆಯಾಟ ಆಡಲು ಸಿದ್ಧರಾದಿರೋ! ಛಿ! ಹೇಡಿಗಳೇ! ರೋಷ ಮತ್ತು ಪೌರುಷಗಳಿದ್ದರೆ ಹೋಗಿ ಆ ಕೋಟೆಯನ್ನು ವಶಪಡಿಸಿಕೊಳ್ಳಬೇಕು. ಇದೇನು ಹೇಡಿತನದ ಕೆಲಸ"

ಹೀಗೆ ಅವನು ಛೀಮಾರಿ ಹಾಕಲು ಎಲ್ಲರೂ ಜೋಲುಮುಖ ಹಾಕಿದರು. ಲಾಲಾಜಿ ಮತ್ತು ಗಟ್ಟಿಯಾಗಿ ಹೇಳತೊಡಗಿದ.

"ನಾನು ಯಾರು ಗೊತ್ತೇ? ಬೂಂದೀ ವಂಶಸ್ಥ. ಕನಸಿನಲ್ಲೂ ಬೂಂದೀಕೋಟೆಗೆ ಇಂತಹ ಅವಮಾನ ನಡೆಯಲು ನಾನು ಒಪ್ಪಲಾರೆ. ಅದರಿಂದಲೇ ಈ ಕೋಟೆ ಪ್ರವೇಶಿಸಿದೆ. ಇದನ್ನು ಕಾಪಾಡಲು ನಿರ್ಧರಿಸಿದೆ. ಬನ್ನಿ, ಯಾರು ಬರುವಿರೇ ಬನ್ನಿ. ಬೂಂದೀ ವಂಶಸ್ಥನೆಂದರೆ ಎಂತಹವರು ಎಂಬುದನ್ನು ತೋರಿಸುವೆನು" ಎಂದು ತೊಡೆ ತಟ್ಟಿ ಮೀಸೆಯಮೇಲೆ ಕೈ ಹಾಕಿದ.

ಲಾಲಾಜಿ ಸೇನೆಗೂ, ಮೆವಾಡದ ಸೇನೆಗೂ ಭಾರಿ ಕದನವಾಯಿತು.

ಲಾಲಾಜಿ ಸೈನಿಕರೂ ಕೆಲವರೇ ಆದರೂ ಅತಿ ಪೌರುಷದಿಂದ ಹೋರಾಡಿ ಮೇವಾಡದ ಸೈನಿಕರಲ್ಲಿ ಹಲವರನ್ನು ವೀರಸ್ವರ್ಗಕ್ಕೆ ಕಳುಹಿಸಿದರು.

'ಕೋಟೆ ವಶವಾಯಿತು' ಎಂಬ ಸುದ್ದಿ ಕಿವಿಗೆ ಬಿದ್ದಕೂಡಲೇ ತುತ್ತು ಬಾಯಲ್ಲಿಟ್ಟುಕೊಳ್ಳೋಣವೆಂದು ತಟ್ಟೆಯ ಮುಂದೆ ಕುಳಿತಿದ್ದ ರತ್ನರಾಣಾಗೆ ಈ ವಿಷಯ ತಿಳಿದ ಕೂಡಲೇ ತನ್ನ ಅವಿವೇಕಕ್ಕೆ ತುಂಬಾ ಪಶ್ಚಾತ್ತಾಪಪಟ್ಟ.

ಲಾಲಾಜಿಯ ಕೃತಿ ರತ್ನರಾಣಾನ ಮನಸ್ಸಿಗೆ ನಾಟಿತು. ಕೃತಕ ಮುತ್ತಿಗೆಯಲ್ಲಾದರೂ ಬೂಂದೀ ಕೋಟೆಗೆ ಅವಮಾನವಾಗುವುದನ್ನು ಸಹಿಸಲಾರದ ಲಾಲಾಜಿ ಅಭಿಮಾನವನ್ನು ರಾಣಾ ಬಹಳವಾಗಿ ಮೆಚ್ಚಿಕೊಂಡ.

ಅಂದಿನಿಂದ ಬೂಂದೀ ವಂಶಸ್ಥರೊಂದಿಗೆ ಕಾಲುಗೆರೆದು ಜಗಳವಾಡಬಾರದೆಂದು ನಿರ್ಧರಿಸಿಕೊಂಡ ರತ್ನರಾಣಾ.



## ಉತ್ತರ ಹೇಳು

1. ಪ್ರಪಂಚದಲ್ಲಿ ಉದ್ದವಾದ ಗೋಡೆಯಿರುವುದೆಲ್ಲಿ?
   - ಇಂಡಿಯಾ
   - ಚೈನಾ
   - ರಷ್ಯಾ
2. ಪ್ರಪಂಚದಲ್ಲೆಲ್ಲಾ ಅಂದವಾದ ರಾಜಭವನ ವೆಲ್ಲಿದೆ?
   - ರೋಮ್
   - ಮಾಸ್ಕೋ
   - ಲಂಡನ್
3. ಅಡವಿಗಳು ಹೆಚ್ಚಾಗಿರುವುದೆಲ್ಲಿ?
   - ಬಂಗಾಳ
   - ಅಸ್ಸಾಂ
   - ಮಧ್ಯಪ್ರದೇಶ
4. 'ಕರ್ಣಭಾರ' ಬರೆದವರು ಯಾರು?
   - ರನ್ನ
   - ಕುಮಾರವ್ಯಾಸ
   - ಭಾಸ
5. ಟೈಪ್‌ರೈಟಿಂಗ್ ಯಂತ್ರ ಕಂಡುಹಿಡಿದವರು ಯಾರು?
   - ಫರಾಡೆ
   - ಶೋಲ್ಸ್
   - ಡೇವಿ
6. ದುರ್ಬೀನನ್ನು ಕಂಡು ಹಿಡಿದಾತಯಾರು?
   - ಗೆಲೇಲಿಯೋ
   - ಅಡಿಸ್ಸ
   - ವಾಟ್

| | |
|---|---|
| 1. ಚೈನಾ | 4. ಭಾಸ |
| 2. ರೋಮ್ | 5. ಶೋಲ್ಸ್ |
| 3. ಅಸ್ಸಾಂ | 6. ಡೇವಿ |

## ದೂರದ ಬೆಟ್ಟ

*

ಸನಿಯದಲ್ಲಿರುವ ಬೆಟ್ಟಗಳಿಗೂ ದೂರದಲ್ಲಿರುವ ಬೆಟ್ಟಗಳಿಗೂ ತುಂಬಾ ವ್ಯತ್ಯಾಸ ಕಾಣಬರುತ್ತವೆ.

ಹತ್ತಿರದಲ್ಲಿರುವ ಬೆಟ್ಟಗಳು ಕಲ್ಲು ಬಂಡೆಗಳೊಂದಿಗೆ ಮರಗಿಡಗಳೊಂದಿಗೆ ನಿಜರೂಪದಲ್ಲಿ ಬಣ್ಣದಲ್ಲಿ ಕಾಣಿಸುವುದು. ಆದರೆ ದೂರದಲ್ಲಿರುವ ಬೆಟ್ಟಗಳ ಮಾತು ಹಾಗಲ್ಲ. ಅದು ನೀಲಿ ಬಣ್ಣವಾಗಿರುವಂತೆ ಕಾಣಿಸುತ್ತದೆ. ಏಕೆ?

ಇದೇ ವಿಚಿತ್ರ. ಆರೀತಿ ನೀಲಿಬಣ್ಣವಾಗಿ ಕಾಣಿಸುವುದು ಬೆಟ್ಟದ ಬಣ್ಣವಲ್ಲ. ಅದು ಗಾಳಿಯಬಣ್ಣ. ಗಾಳಿಯಲ್ಲಿ ಸೂರ್ಯನ ಕಿರಣಗಳು ಪಸರಿಸುತ್ತಿರುತ್ತವೆ. ಸೂರ್ಯ ಕಿರಣಗಳು ಅನೇಕ ಬಣ್ಣಗಳಿಂದ ಕೂಡಿರುವುದೆಂದು ಎಲ್ಲರಿಗೂ ತಿಳಿದ ವಿಷಯವಷ್ಟೆ. ಸೂರ್ಯಕಿರಣಗಳು ಪಸರಿಸುವುದರಿಂದ ಗಾಳಿ ನೀಲಿಬಣ್ಣದಂತೆ ಕಾಣಿಸುವುದರಲ್ಲಿ ಆಶ್ಚರ್ಯವೇನಿಲ್ಲ.

ಬಣ್ಣದ ಪೊರೆಯಿರುವ ಯಾವುದೇ ವಸ್ತುವನ್ನು ಕಣ್ಣಮುಂದೆ ಇಟ್ಟುಕೊಂಡು ಬೆಟ್ಟವನ್ನು ನೋಡಿದರೆ ಬೆಟ್ಟ ಆ ಬಣ್ಣವಾಗಿ ಕಾಣಿಸುವುದು ಸಹಜ. ಅದೇರೀತಿ ಗಾಳಿಯಲ್ಲಿರುವ ತಿಳಿ ನೀಲಿಬಣ್ಣದ ಕಿರಣಗಳಿಂದ ದೂರವಲ್ಲಿರುವ ಬೆಟ್ಟಗಳು ನಮಗೆ ಆದೇ ಬಣ್ಣದಲ್ಲಿ ಕಾಣಿಸುವುದು.




ಗುರುಮೂರ್ತಿ ಎಂಬ ಬಡವನೊಬ್ಬನಿದ್ದನು. ಆತ ಕೂಲಿನಾಲಿ ಮಾಡಿಕೊಂಡು ಜೀವನ ಸಾಗಿಸುತಿದ್ದ. ಸಂಸಾರವೋ ಬಲು ದೊಡ್ಡದು· ಮನೆತುಂಬಾ ಮಕ್ಕಳು !

ಉಚಿತವಾದ ಆದಾಯವಿಲ್ಲದೆ ಮಕ್ಕಳು ಮರಿಗಳೊಂದಿಗೆ ಜೀವನನಡೆಸುವುದು ಒಂದು ಭಾರಿ ಸಮಸ್ಯೆಯಾಗಿ ತೋರಿತು ಗುರುಮೂರ್ತಿಗೆ. ಊಟಕ್ಕೆ ಗತಿಯಿಲ್ಲದೆ, ಉಪವಾಸವಿರಬೇಕಾದ ಸನ್ನಿವೇಶಗಳೂ ಅನೇಕ ವಿದ್ದವು.

ಇಂತಹ ಸ್ಥಿತಿಯಲ್ಲಿ 'ಹೇಗೆ ಸಂಸಾರ ಸಾಗಿಸುವುದು?' ಎಂದು ದಂಪತಿಗಳಿಬ್ಬರೂ ರಾತ್ರಿ ಹಗಲು ಯೋಚಿಸುವರು.

ಹೀಗೇ ಇರಲು ಕೈಲಾಸಪುರಕ್ಕೆ ಒಬ್ಬ ಸನ್ಯಾಸಿ ಬಂದ. ಆ ಸನ್ಯಾಸಿಯು ವರ್ತನೆ ತುಂಬಾ ವಿಚಿತ್ರವಾಗಿತ್ತು. ಯಾರಾದರೂ ಪುಣ್ಯಮಾಡಿದವರಿದ್ದರೆ ಅವರ ಪುಣ್ಯಕಾರ್ಯಗಳಿಗೆ ಬೆಲೆಕಟ್ಟಿ ಅದಕ್ಕೆ ತಕ್ಕ ಹಣ ತೆರುವನು.

ಈ ರೀತಿ ಅನೇಕ ಪುಣ್ಯಾತ್ಮರು ಸನ್ಯಾಸಿಯ ಹತ್ತಿರ ಬಂದು, ಅವರವರ ಪುಣ್ಯವನ್ನು ತಕ್ಕಡಿಯಲ್ಲಿ ತೂಗಿಸಿಕೊಂಡು, ಸನ್ಯಾಸಿಯಿಂದ ಉಚಿತ ಬಹುಮಾನವನ್ನು ಧನರೂಪದಲ್ಲಿ ಪಡೆಯುತ್ತಿದ್ದರು.

ಬಹುಮಂದಿ ಪುಣ್ಯಾತ್ಮರು ಸನ್ಯಾಸಿಯ ಹತ್ತಿರ ಹೋಗಿ ಹಣ ಪಡೆಯುತ್ತಿರುವರೆಂಬ ವಿಷಯ ನಿಮಿಷ ಮಾತ್ರದಲ್ಲಿ ಊರಲ್ಲೆಲ್ಲಾ ಹರಡಿತು.

ಈ ವಿಷಯ ಗುರುಮೂರ್ತಿಯ ಹೆಂಡತಿಗೂ ತಿಳಿಯಿತು. ಆಕೆ ದಿನಾ ತನ್ನ ಗಂಡನನ್ನು ಅಲ್ಲಿಗೆ ಹೋಗುವಂತೆ ಪೀಡಿಸುತ್ತಿದ್ದಳು.

"ಕಾಸಿಗೆ ಗತಿಯಿಲ್ಲದ ಹುಟ್ಟುದರಿದ್ರರು ನಾವು. ಎಂದಾದರೂ ದಾನಮಾಡಿರುವೆವೇ, ಧರ್ಮ ಮಾಡಿರುವೆವೇ? ಬಡವರು ಪುಣ್ಯ ಮಾಡುವುದೆಂದರೆ ಹೇಗೆ ಸಾಧ್ಯ? ಏನು ಮಾಡಬೇಕೆಂದರೂ ಧನವಂತರಿಂದಮಾತ್ರ ಸಾಧ್ಯ" ಎಂದು ಒಂದು ರೀತಿ ನಿಸ್ಪೃಹತೆಯಿಂದ ಮಾತನಾಡುವನು ಗುರುಮೂರ್ತಿ.

ಕಂಚಾಣಿ ಶರಣಪ್ಪ, ಮುದ್ದೇಬಿಹಾಳ



"ಹಾಗಲ್ಲ, ಹುಟ್ಟಿದಾಗಲಿಂದ ಇಂದಿನ ವರೆವಿಗೂ ಸಣ್ಣದೋ ಪುಟ್ಟದೋ ಯಾವುದೋ ಒಂದು ಪುಣ್ಯಕಾರ್ಯ ಮಾಡಿರದೇ ಇರುತ್ತೀವೆಯೇ? ಸ್ವಲ್ಪ ಜ್ಞಾಪಕಮಾಡಿಕೊಳ್ಳೀ ಅಂದ್ರೆ. ನೆರೆಹೊರೆ ಮನೆಯವರೆಲ್ಲಾ ಹೋಗಿ ಅವರ ಪುಣ್ಯ ಕಾರ್ಯಗಳನ್ನು ಮಾರಿಕೊಂಡು ನೂರಾರು ರೂಪಾಯಿ ತಂದುಕೊಳ್ಳುತ್ತಿರುವರು. ನೀವೂ ಹೋಗಿ ಬನ್ನಿ; ಏನೋ ಮಕ್ಕಳೂ ನಾವೂ ಉಳಿದೇವು" ಎಂದು ಹಠಹೂಡಿದಳು. ಆತನ ಹೆಂಡತಿ.




ಮನೆಯಲ್ಲಿ ಮಡದಿಯ ಕಾಟ ತಡೆಯು ಲಾರದೆ ಒಂದು ದಿನ ಬುತ್ತಿಕಟ್ಟಿಕೊಂಡು ಮೂರ್ತಿ ಕೈಲಾಸಪುರಕ್ಕೆ ಹೊರಟ.

ಅನೇಕ ಅರಣ್ಯಗಳನ್ನು ದಾಟಿ, ಗುಡ್ಡ ಗಳನ್ನು ಹತ್ತಿಳಿದು ಹೋಗುತ್ತಿದ್ದ.

ಅದೇ ದಾರಿಯಲ್ಲಿ ಅನೇಕರು ತಾವು ಮಾಡಿದ ಪುಣ್ಯಕಾರ್ಯಗಳನ್ನು ಜ್ಞಾಪಿಸಿ ಕೊಳ್ಳುತ್ತಾ 'ನನಗಿಷ್ಟು ಬರುತ್ತದೆ, ನನ ಗಿಷ್ಟು ಬರುತ್ತದೆ' ಎಂದು ಅಂದಾಜು ಹಾಕಿ ಕೊಳ್ಳುತ್ತಾ ಹೋಗುತ್ತಿದ್ದಾರೆ.

ಕೆಲವರು ಪಲ್ಲಕ್ಕಿಗಳಲ್ಲೂ, ಕೆಲವರು, ಕುದುರೆಗಳಮೇಲೂ ಮತ್ತೆ ಕೆಲವರು ಎತ್ತಿನ ಗಾಡಿಗಳಲ್ಲೂ ಹೋಗುತ್ತಿರುವರು.

ಅವರ ಮಾತುಗಳನ್ನೆಲ್ಲಾ ಕೇಳಿ ಗುರು ಮೂರ್ತಿಗೆ ಕುತೂಹಲವುಂಟಾಯಿತು. ತಾನು ಯಾವುದಾದರೂ ಒಂದು ಸಣ್ಣ ಪುಣ್ಯಕಾರ್ಯ ಮಾಡಿರುವೆನೇ ಎಂದು ತೀವ್ರವಾಗಿ ಯೋಚಿ ಸುತ್ತಾ ನಡೆಯುತ್ತಿದ್ದ.

'ಅಲ್ಲ, ನಾನು ಆ ಸನ್ಯಾಸಿಯ ಹತ್ತಿರ ಹೋಗಿ ಸರಿಯಾದ ಸಮಾಧಾನ ಹೇಳಲಾರದೆ ಜೋಲುಮೋರೆ ಹಾಕಿಕೊಂಡು ಬರಬೇಕಾಗು ವುದೇನೋ ಎಂದು ಆತನೆಷ್ಟೋಸಾರಿ ಅಧೀರ ನಾಗುತ್ತಿದ್ದ. ಆದರೂ ತನ್ನ ಹಠ ಬಿಡಲಿಲ್ಲ. ಪ್ರಯಾಣ ಮುಂದುವರಿಸುತ್ತಲೇ ಇದ್ದ.

ಆ ಅರಣ್ಯದ ಅಂಚಿಗೆ ಬಂದರು ಪ್ರಯಾ ಣಿಕರು. ಒಂದು ಕಡೆ ಭಾರೀ ಆಲದ ಮರ ವೊಂದಿತ್ತು.

ಅದನ್ನು ನೋಡಿದ ಕೂಡಲೇ ಆತನ ಮುಖ ಅರಳಿತು. ಅದಕ್ಕೊಂದು ಕಾರಣವಿದೆ, ಅದೇ ನಂದರೆ: ಕೆಲವು ವರ್ಷಗಳ ಹಿಂದೆ ಒಂದು ದಿನ




ಗುರುಮೂರ್ತಿ ಅದೇ ಮಾರ್ಗದಲ್ಲಿ ಪ್ರಯಾಣ ಮಾಡಬೇಕಾಗಿ ಬಂದಿತ್ತು. ನಡೆದು ನಡೆದು ಆಯಾಸ ಹೊಂದಿದ್ದನಾದುದರಿಂದ ಆತನು ಆ ಆಲದ ಮರದ ಕೆಳಗೆ ವಿಶ್ರಾಂತಿ ಪಡೆಯಲು ಕುಳಿತುಕೊಂಡನು. ಅಂದೂ ಸಹ ಗುರುಮೂರ್ತಿ ಬಡವನೇ ಆಗಿದ್ದ.

ಗುರುಮೂರ್ತಿ ಹೊರಡುವ ಮೊದಲು ಆತನ ಹೆಂಡತಿ ಸ್ವಲ್ಪಹಿಟ್ಟು ಸಾಲತಂದು ತಿಂಡಿ ತಿನಸುಗಳನ್ನು ಮಾಡಿಕೊಟ್ಟಿದ್ದಳು. ಪ್ರಯಾಣ ಮಾಡಿ ದಣಿದಿದ್ದರಿಂದ ಹಸಿವು ಬಾಯಾರಿಕೆ ಹೆಚ್ಚಾಯಿತು.

ಆದುದರಿಂದ ಆತನು ಆ ಮರದಡಿ ಕುಳಿತುಕೊಂಡ ಕೂಡಲೇ ತಿಂಡಿಯ ಗಂಟನ್ನು ಬಿಚ್ಚಿ ತಿನ್ನಲು ಸಿದ್ಧನಾದ.

ಅಷ್ಟರಲ್ಲಿ 'ಅಪ್ಪಾ, ಮೂರು ದಿನಗಳಿಂದ ಹೊಟ್ಟೆಗಿಲ್ಲದೆ ಸಾಯುತ್ತಿದ್ದೇನೆ. ಸ್ವಲ್ಪ ಕವಳ ಹಾಕೀ ಅಪ್ಪಾ' ಎಂದು ದೈನ್ಯತೆಯಿಂದ ಯಾರೋ ಕೇಳುವ ಸ್ವರ ಕೇಳಿಸಿತು.

ಗುರುಮೂರ್ತಿ ತಲೆ ಎತ್ತಿ ನೋಡಿದ. ಒಬ್ಬ ಹಣ್ಣು ಹಣ್ಣು ಮುದುಕ ಅವನೆದುರಿನಲ್ಲಿ ನಿಂತಿದ್ದಾನೆ.

ಗುರುಮೂರ್ತಿಯ ಹೃದಯದಲ್ಲಿ ಅನುಕಂಪ ವುಂಟಾಯಿತು. ಉಫ್ ಎಂದರೆ ಕೆಳಗೆ ಬೀಳುವ ಹಾಗಿದ್ದಾನೆ ಆ ಮುದುಕ.

ಕ್ಷಣವಾದರೂ ತಡಮಾಡದೆ ಗುರುಮೂರ್ತಿ ಎದ್ದು ಆ ಮುದುಕನ ಕೈ ಹಿಡಿದುಕೊಂಡು ತಾನು ಕುಳಿತಿದ್ದ ಜಾಗದಲ್ಲಿ ಕೂರಿಸಿದ. ತಾನು ತಿನ್ನಬೇಕೆಂದಿದ್ದ ತಿಂಡಿ ತಿನಸುಗಳನ್ನು ಆತನಿಗೆ ಕೊಟ್ಟ.

ಅದನ್ನು ಕಂಡು ಮುದುಕ ಸಂತಸಗೊಂಡ. ಗುರುಮೂರ್ತಿ ಬಲವಂತಮಾಡಲು ತಿನ್ನಲು ಪ್ರಾರಂಭಿಸಿದ.

ಅದರಲ್ಲಿ ಅರ್ಧತಿಂದನೋ ಇಲ್ಲವೋ ಆ ಮುದುಕನಿಗೆ ಹೊಟ್ಟೆ ತುಂಬಿತು. ಸಂತೃಪ್ತಿಗೊಂಡ. ಆತನು ಗುರುಮೂರ್ತಿಯನ್ನು ಆಶೀರ್ವದಿಸಿ ತನ್ನ ದಾರಿಹಿಡಿದ.

ಈಗ ಈ ಆಲದಮರ ನೋಡಿದ ಕೂಡಲೇ ಗುರುಮೂರ್ತಿಗೆ ಅಂದಿನ ಸಂಘಟನೆ ತಡಕ್ಕನೆ ಜ್ಞಾಪಕಕ್ಕೆ ಬಂತು. ಆತನ ಮುಖ ಅರಳಲು ಅದೇ ಕಾರಣ. ಏನೇ ಇರಲಿ, ಇದೂ ಒಂದು ಪುಣ್ಯತಾನೆ? ಈ ಸಣ್ಣದೊಂದು ಸುಕೃತ

ಜ್ಞಾಪಕಕ್ಕೆ ಬರಲು, ಗುರುಮೂರ್ತಿಯ ಆನಂದ ಅಷ್ಟಿಷ್ಟಲ್ಲ. ಆತನಿಗೀಗ ಮನಸ್ಸಿನಲ್ಲಿ ಒಂದು ರೀತಿ ಧೈರ್ಯಸಹ ಬಂತು.

ಈ ಮನೋಧೈರ್ಯದಿಂದ ಆತನು ಬೇಗ ಬೇಗ ಹೆಜ್ಜೆಹಾಕಿ ಕೈಲಾಸಪುರವನ್ನು ಸೇರಿಕೊಂಡ.

ಇನ್ನು ಕೈಲಾಸಪುರದಲ್ಲಿ ನಡೆಯುತ್ತಿದ್ದ ವಿಷಯದ ಕಡೆ ಗಮನಕೊಡೋಣ.

ಸನ್ಯಾಸಿ ನೆಲಸಿದ್ದ ಮನೆಯಲ್ಲಿ ಜನ ತುಂಬಿ ಹೋಗಿದ್ದರು. ಸನ್ಯಾಸಿಯ ಎದುರಾಗಿ ಒಂದು ತಕ್ಕಡಿ ತೂಗಹಾಕಿದ್ದರು.

ಪುಣ್ಯಾತ್ಮರು ಒಬ್ಬೊಬ್ಬರಾಗಿ ಬಂದು ತ್ರಾಸಿನ ಬಟ್ಟಲೊಂದರಲ್ಲಿ ಕುಳಿತುಕೊಳ್ಳುವರು. ಎರಡನೇಯ ತಟ್ಟೆಯಲ್ಲಿ ಸನ್ಯಾಸಿ ಹಣ ಸುರಿಯುವನು. ಅವರವರು ಮಾಡಿದ ಪುಣ್ಯಕಾರ್ಯಕ್ಕೆ ಯಥೋಚಿತವಾದ ಹಣ ಸಿಗುವುದು.

ಅವರು ಆ ಹಣವನ್ನು ಮೂಟೆಕಟ್ಟಿಕೊಂಡು ತಮ್ಮ ತಮ್ಮ ಮನೆಗಳಿಗೆ ಹಿಂತಿರುಗುತ್ತಿದ್ದರು.

ಈ ಪುಣ್ಯಜೀವಿಗಳನ್ನು ನೋಡಿ ಗುರುಮೂರ್ತಿಗೆ ತುಸ ಲಜ್ಜೆ ಆಯಿತು. ಅಲ್ಲಾ, ತಾನು ಮಾಡಿದ ಆ ಅಲ್ಪ ಸಹಾಯವನ್ನು ಎಲ್ಲರಮುಂದೆ ಹೇಗೆ ಹೇಳಲಿ ಎಂದು ಆತ ಅಧೈರ್ಯಗೊಂಡ.

ಹಾಗೆ ಹೇಳಿದ ತರುವಾಯ ಸಂನ್ಯಾಸಿ ಆದನ್ನು ಪುಣ್ಯಕಾರ್ಯವೆಂದು ಗಣನೆ ಮಾಡದೆ




ಹೋದರೆ ತನ್ನ ಅವಸ್ಥೆ ನಗಪಾಟ ಆಗುವುದು ಖಂಡಿತ. ಈ ಸಂಶಯ ಆತನನ್ನು ಬಹಳವಾಗಿ ಪೀಡಿಸುತಿತ್ತು.

ಆದುದರಿಂದ ಆತನು ಹಿಂದೆಹಿಂದಕ್ಕೆ ಸರಿಯುತ್ತಾ ಹೋಗಿ ಒಂದು ಮೂಲೆಗೆ ಒರಗಿ ಕುಳಿತುಕೊಂಡ.

ಗುರುಮೂರ್ತಿಯನ್ನು ಸನ್ಯಾಸಿ ನೋಡಿದ. "ಯಾರಯ್ಯಾ ನೀನು? ಏಕೆ ಬಂದೆ. ಏನು ವಿಷಯ" ಎಂದು ಕೇಳಿದ.

ಅದಕ್ಕೆ ಗುರುಮೂರ್ತಿ ಅಂಜುತ್ತಾ "ಸ್ವಾಮಿ, ಬಡತನದ ಬೇಗೆ ತಡೆಯಲಾರದೆ ನಾನೂ ಏನಾದರೊಂದು ಹೇಳಿ ನಿಮ್ಮಿಂದ ಹಣ ಪಡೆಯಲು ಬಂದೆ. ಆದರೆ ನಾನು ಮಾಡಿದ ಪುಣ್ಯಕಾರ್ಯ ಮಹತ್ತರವಾದುದೇ




ನಲ್ಲ ಇಷ್ಟೇ" ಎಂದು ಮೆಲ್ಲನು ಸಿರಿದ. ಆಗ ಸನ್ಯಾಸಿ "ಅಣ್ಣಾ, ಪುಣ್ಯಕಾರ್ಯ ಗಳಲ್ಲಿ ಹಿರಿದು-ಕಿರಿದು ಎಂಬ ತಾರತಮ್ಯವಿಲ್ಲ. ಹೆಚ್ಚು-ಕಡಿಮೆ ಎಂಬ ಬೇಧಬಾವವಿಲ್ಲ. ಸಂಕೋಚಪಟ್ಟುಕೊಳ್ಳದೆ ಹೇಳು" ಎಂದು ಧೈರ್ಯಹೇಳಿದ.

ಆಗ ಸನ್ಯಾಸಿಯ ಅನುಮತಿ ಪ್ರಕಾರ ಆತನು ಒಂದು ತಟ್ಟೆಯಲ್ಲಿ ಕುಳಿತುಕೊಂಡ.

"ನೀನು ಮಾಡಿದ ಪುಣ್ಯಕಾರ್ಯ ವೇನಪ್ಪಾ" ಎಂದು ಪ್ರಶ್ನೆಮಾಡಿದ ಸನ್ಯಾಸಿ. ಗುರುಮೂರ್ತಿ ತನ್ನ ನೆನೆಪಿಗೆ ಬಂದ ವಿಷಯ ವನ್ನು ವಿನಯದಿಂದ ಅರಿಕೆ ಮಾಡಿದ. ಅದನ್ನು ಕೇಳಿ ಅಲ್ಲಿ ನೆರೆದಿದ್ದ ಜನ ಪಕಪಕ ನಕ್ಕರು. ಆಗ ಸನ್ಯಾಸಿ ಅವರನ್ನು ಗದರಿಸಿ, ತ್ರಾಸಿನ ಎರಡನೇ ತಟ್ಟೆಯಲ್ಲಿ ಎಂದಿನಂತೆ ಹಣ ಸುರಿ ಯಲು ಪ್ರಾರಂಭಿಸಿದ.

ಹಾಕಿದ, ಹಾಕಿದ, ಒಂದು ಗೋಣಿ ಚೀಲ ತುಂಬುವಷ್ಟು ನಗನಾಣ್ಯಗಳನ್ನು ಹಾಕಿದ. ಗುರುಮೂರ್ತಿ ಕುಳಿತಿದ್ದ ತಟ್ಟೆ ಸ್ವಲ್ಪ ವಾದರೂ ಕದಲಲಿಲ್ಲ.

ಇದನ್ನು ಕಂಡು ಸನ್ಯಾಸಿ ಚಕಿತನಾದ. ಜನ ಆಶ್ಚರ್ಯಗೊಂಡರು. ಗುರುಮೂರ್ತಿಗೆ ಮಾತ್ರ ಇದೊಂದೂ ಅರ್ಥವಾಗಲೊಲ್ಲದು.

ಸನ್ಯಾಸಿಯ ಹತ್ತಿರ ವಿದ್ದ ಹಣವೆಲ್ಲಾ ಮುಗಿದು ಹೋಯಿತು.

ಆಗ ಆತನು ಗುರುಮೂರ್ತಿಗೆ ನಮ್ರತೆ ಯಿಂದ ನಮುಸ್ಕಾರಮಾಡಿ "ಎಲೈ, ಮಹಾನು ಭಾವನೇ, ನೀನು ಮಾಡಿದ ಪುಣ್ಯ ತುಂಬಾ ಮಹತ್ತರವಾದದು. ಅಮೂಲ್ಯವಾದುದು. ಆ ಪುಣ್ಯಕ್ಕೆ ಸರಿ ಹೋಗುವಷ್ಟು ಹಣ ಕೊಡುವ ಸಾಮರ್ಥ್ಯ ನನಗಿಲ್ಲ. ನನ್ನನ್ನು ಮನ್ನಿಸಬೇಕು. ನನ್ನ ಹತ್ತಿರ ವಿರುವ ಹಣ ವೆಲ್ಲವನ್ನೂ ತೆಗೆದುಕೊಂಡು ತೃಪ್ತಿಪಡ ಬೇಕೆಂದು ಕೋರುವೆನು" ಎಂದು ಪ್ರಾರ್ಥಿಸಿದ.

ಈ ಮಾತು ಕೇಳಿ ಗುರುಮೂರ್ತಿ ಚಕ್ಕನೆ ತಟ್ಟೆಯಿಂದು ಎದ್ದು,

"ಯತಿಪುಂಗವನೇ ನಿಜವಾಗಿ ನಾನು ಮಾಡಿದ ಪುಣ್ಯ ಅಷ್ಟು ಗಣ್ಯವಾದುದೇ? ಬೆಲೆ ಕಟ್ಟಲಾರದಂತಹುದೇ? ಹಾಗಾದರೆ ನನ್ನ ಸುಕೃತವನ್ನು ಈ ತುಚ್ಛವಾದ ಹಣಕ್ಕೆ

ಮಾರಿಕೊಳ್ಳಲಾರೆ. ಬೇಡ, ನಿಮ್ಮ ಹಣ ನಿಮ್ಮ ಹತ್ತಿರವೇ ಇಟ್ಟುಕೊಳ್ಳಿ. ಅದನ್ನು ಪುಣ್ಯ ಮಾರಿಕೊಳ್ಳುವವರಿಗೆ ಕೊಡಿ" ಎಂದು ಮನೆಯಕಡೆ ದಾರಿಹಿಡಿದ.

ಅಲ್ಲಿದ್ದ ನೂರಾರುಜನ ಶ್ರೀಮಂತರೂ, ಪುಣ್ಯಾತ್ಮರೂ ಗುರುಮೂರ್ತಿಯ ನಡತೆ ನೋಡಿ ವಿಸ್ಮಯದಿಂದ ಮೂಗಿನ ಮೇಲೆ ಬೆರಳಿಟ್ಟುಕೊಂಡರು.

ಪುಣ್ಯವನ್ನು ಕೊಳ್ಳಲು ಬಂದ ಸನ್ಯಾಸಿಯ ಆಶ್ಚರ್ಯಕ್ಕೆ ಮೇರೆಯೇ ಇಲ್ಲ. ಆಗ ಆತನು ಗುರುಮೂರ್ತಿಯನ್ನು ಕೂಗಿ ಕರೆದು

"ಗುರುಮೂರ್ತಿ, ನೀನು ಪುಣ್ಯಶೀಲನು ಮಾತ್ರವಲ್ಲ, ಮಹಾತ್ಯಾಗಿ. ಈಗ ಸಾಟಿಯಿಲ್ಲದ ತ್ಯಾಗಮಾಡಿದುದರಿಂದ ನಿನ್ನ ಸುಕೃತ ಇಮ್ಮಡಿಸಿತು. ನನ್ನ ಹತ್ತಿರ ಪ್ರತಿಫಲ ಪಡೆಯದಿದ್ದರೂ ಸಹ, ಎಂದೋ, ಯಾವುದೋ ಒಂದು ರೀತಿ ನಿನ್ನ ಸುಕೃತಕ್ಕೆ ತಕ್ಕ ಫಲವನ್ನು ನೀನು ಅನುಭವಿಸಲೇಬೇಕು. ಇದು ದೈವನಿರ್ಣಯ" ಎಂದು ಹೇಳಿ ಆತನು ಅಲ್ಲಿಂದ ಮಾಯವಾದ.

ಅವನು ಸಾಮಾನ್ಯ ಸನ್ಯಾಸಿಯಲ್ಲವೆಂದು ಆಗತಾನೇ ಎಲ್ಲರಿಗೂ ತಿಳಿಯಿತು.

ಮತ್ತೆ ಕೆಲವು ದಿನಗಳಿಗೆಲ್ಲಾ ಗುರುಮೂರ್ತಿ ಮನೆ ಸೇರಿಕೊಂಡ. ಆಗ ಅಲ್ಲಿನ ದೃಶ್ಯ ಅವನನ್ನು ಬೆರಗುಗೊಳಿಸಿತು. ಆತನ ಹೆಂಡತಿ ಸರ್ವಾಲಂಕಾರ ಭೂಷಿತೆಯಾಗಿ ನಿಂತಿದ್ದಳು. ಮಕ್ಕಳೆಲ್ಲಾ ಶ್ರೀಮಂತ ಪುತ್ರರ ಹಾಗೆ ಕಂಗೊಳಿಸುತಿದ್ದಾರೆ. ಗುರುತು ಹಿಡಿಯಲೂ ಸಾಧ್ಯವಾಗದಷ್ಟು ಸಕಲ ಸೌಭಾಗ್ಯಗಳಿಂದ ಕಾಣುತಿತ್ತು ಅವನ ಮನೆಯೂ ಸುತ್ತುಮುತ್ತ ವಠಾರವೂ!

ಆಕಸ್ಮಿಕವಾದ ಈ ಬದಲಾವಣೆಗೆ ಕಾರಣವೇನೆಂದು ಕೇಳಲು, ಹುಟ್ಟುದರಿದ್ರನಾದ ಗುರುಮೂರ್ತಿಗೆ ಆತನ ದೊಡ್ಡಪ್ಪ ತನ್ನ ಆಸ್ತಿಯನ್ನೆಲ್ಲಾ ಸಂತತಿಯಿಲ್ಲದ ಪ್ರಯುಕ್ತ ಆತನ ಹೆಸರಿಗೇ ಬರೆದುಕೊಟ್ಟ, ನೆಂದು ತಿಳಿದುಬಂತು.

ಗುರುಮೂರ್ತಿ ಐಶ್ವರ್ಯವಂತನಾದರೂ, ಗರ್ವಿಷ್ಠನಾಗಲಿಲ್ಲ. ಎಷ್ಟೋ ಸತ್ಕಾರ್ಯಗಳನ್ನುಮಾಡಿ ಕೀರ್ತಿಶಾಲಿಯಾದನು.



# ಜೇನ್ನೊಣ ಏಕೆ ಕುಟುಕುವುದು ?

**ಜೇ**ನ್ನೊಣ ಕೊಂಡಿಯಿಂದ ಕುಟುಕಿದಾಗ ನಮಗೆ ವಿಪರೀತ ನೋವುಂಟಾಗುತ್ತದೆ. ಜೇನ್ನೊಣದ ಕೊಂಡಿ ಅಂದರೆ ಒಂದು ಸಣ್ಣನೆಯ ಹರಿತವಾದ ಮುಳ್ಳಿನಂತಹ ಕೊಳಲಿ. ಕುಟುಕಿದಾಗ ಜೇನ್ನೊಣ ಇದರಮೂಲಕ ಒಂದು ತೊಟ್ಟು ವಿಷ ಪದಾರ್ಥವನ್ನು ಸುರಿಸುತ್ತದೆ.

ಜೇನು ಹುಟ್ಟಿನಲ್ಲಿ ಕೆಲಸಮಾಡುವ ಜೇನ್ನೊಣಗಳು ಮಾತ್ರವೇ ಕುಟುಕುತ್ತವೆ. ಕೆಂಜೇನೂ ಸಹ ಇದೇ ರೀತಿ ಎಂದು ಹೇಳಬಹುದು.

ಸಾಧಾರಣವಾಗಿ ಜೇನ್ನೊಣವಾಗಲೀ ಕೆಂಜೇನಾಗಲೀ ಒಂದುಸಾರಿ ಕಚ್ಚುತ್ತವೆ. ಏಕೆಂದರೆ ಶೂಲದಂತಿರುವ ಅದರಕೊಂಡಿ ಕಚ್ಚಿದ ತಕ್ಷಣ ಹೊರಗೆ ತೆಗೆಯಲು ಸಾಧ್ಯವಾಗುವುದಿಲ್ಲ. ಹೊರಗೆ ತೆಗೆಯುವ ಮೊದಲೇ ಕಚ್ಚಿಸಿಕೊಂಡ ಮನುಷ್ಯ ಬೆಚ್ಚಿಬಿದ್ದು, ಆ ಹುಳವನ್ನು ಕೈಯಿಂದೆತ್ತಿ ದೂರಬಿಸಾಡುವನು.



ಆದುದರಿಂದ ಅದಕ್ಕೆ ಕೊಂಡಿಯನ್ನು ಹೊರಕ್ಕೆಳೆದುಕೊಳ್ಳಲು ಸಮಯವಿರುವುದಿಲ್ಲ. ಅದು ಮುರಿದುಹೋಗುತ್ತದೆ. ಕೊಂಡಿಯಿರದ ಹುಳಸತ್ತುಹೋಗುತ್ತದೆ.

ಕೊಂಡಿಯನ್ನು ಹೊರಕ್ಕೆ ಎಳೆಯುವಷ್ಟು ಕಾಲಾವಕಾಶವಿದ್ದಿದ್ದರೆ ಜೇನ್ನೊಣ ಮತ್ತು ಕೆಂಜೇನು ಅಡಿಗಡಿಗೆ ಜನರನ್ನು ಕಚ್ಚುತ್ತಿದ್ದುವು.

ಒಂದಾನೊಂದು ಕಾಲದಲ್ಲಿ ಈ ನೊಣಗಳ ಕೊಂಡಿಗಳು ಈ ರೀತಿ ಕುಟುಕಲು ಉಪಯೋಗವಾಗುತ್ತಿರಲಿಲ್ಲ. ಆಗ ಅವು ಅಂಡಕೋಶಕ್ಕೆ ಸಂಬಂಧಿಸಿದ ಅವಯವಗಳಾಗಿದ್ದುವು. ತರುವಾಯ ಕ್ರಮೇಣ ಅವು ಈ ರೀತಿ ವಿಷದ ಶೂಲಗಳಾಗಿ ಬದಲಾಯಿಸಿದವು.

ಈಗಲೂ ಸಹ ಕೆಲವು ಜೇನ್ನೊಣಗಳಿಂದ ಕೊಂಡಿಗಳು ಕಚ್ಚಲು ಸಾಧ್ಯವಾಗುವುದಿಲ್ಲ. ಕಂಡಕಂಡವರಮೇಲೆ ಜೇನ್ನೊಣ ಧಾಳಿಮಾಡುವುದಿಲ್ಲ. ಅವುಗಳನ್ನು ರೊಚ್ಚಿಗೆಬ್ಬಿಸಿದಾಗ ಮಾತ್ರ ಅವು ಕೆರಳುತ್ತವೆ.

ಅವುಗಳ ಕೊಂಡಿಗಳು ಆತ್ಮರಕ್ಷಣೆಮಾಡಿಕೊಳ್ಳಲು ಉಪಯೋಗವಾಗುವುದು.

## ಬಣ್ಣದ ಚಿತ್ರಕಥೆ—೧

**ಹಿಂ**ದೆ, ಗಂಗಪಾಳೆಯವೆಂಬಲ್ಲಿ ಗಂಗನೆಂಬೊಬ್ಬ ರೈತನಿದ್ದ. ಬಹಳ ಒಳ್ಳೆಯವನು. ಆದುದರಂದಲೇ ಊರಿನ ಹತ್ತು ಸಮಸ್ತರು ಸೇರಿ ಆ ಊರಿಗೆ ಅವನ ಹೆಸರಿಟ್ಟರು. ಹೀಗೆ ಒಳ್ಳೆಯ ಹೆಸರು ಪಡೆದಿದ್ದ ಗಂಗನಿಗೆ ಮುಂದೆ ಒಬ್ಬ ಮೊಮ್ಮಗ ಹುಟ್ಟಿದ. ಅವನಿಗೂ ತಾತನ ಹೆಸರನ್ನೆ ಇಟ್ಟರು. ಆದರೆ ಅವನು ಆ ಹೆಸರನ್ನು ಸಾರ್ಥಕಮಾಡಿ ಕೊಳ್ಳಲಿಲ್ಲ. ತಾತ ಎಷ್ಟು ಸಾಧುವೋ ಮೊಮ್ಮಗ ಅಷ್ಟು ದುಷ್ಟ. ಅವನ ಕೊಂಟಿ ತನಕ್ಕೆ ತಕ್ಕಂತೆ ಊರಿನವರು ಅವನನ್ನು 'ಕೊಂಟಿ ಗಂಗ'ನೆಂದು ಕರೆಯುತ್ತಿದ್ದರು.

ತಾತ ಗಂಗ ಸ್ವತಃ ಕಷ್ಟಪಟ್ಟು ಮನೆಕಟ್ಟಿಸಿದ್ದ. ಆದರೆ ಮೊಮ್ಮಗನ ಸ್ವೇಚ್ಛಾಚಾರದಿಂದ ಕಟುಂಬವು ಚೆದರಿಹೋಯಿತು.

ಹಿರಿಗಂಗ ಕಟ್ಟಿದ ಮನೆಯಲ್ಲಿ ಗಂಗಣ್ಣನೂ, ಅನಾಥೆಯಾದ ಅವನ ತಾಯಿಯೂ ವಾಸವಾಗಿದ್ದರು. ಗಂಗಣ್ಣನೊಂದಿಗೆ ತಾಯಿ ಎಲ್ಲವನ್ನೂ ಮನಸ್ಸು ಬಿಟ್ಟು ಹೇಳುವಳಾಗಲಿ, ದೊಡ್ಡತನದಿಂದ ಬದುಕಿದ ಗಂಗಕುಟುಂಬವು ಈ ದುಸ್ಥಿತಿಗೆ ಏಕೆ ಬಂತೆಂದುಮಾತ್ರ ಹೇಳಲಿಲ್ಲ. ಅವರಿಗೆ ಕಷ್ಟದಿಂದಲೇ ಕಾಲವು ಜರುಗುತಿತ್ತು. ಗಂಗಣ್ಣನ ತಾಯಿ ದಿನಕ್ಕೊಂದು ವಸ್ತುವನ್ನು ಮಾರಿ ಸಂಸಾರ ಸಾಗಿಸುತ್ತಿದ್ದಳು.

ಮನೆಯ ವಸ್ತುಗಳನ್ನೆಲ್ಲಾ ಮಾರುವುದೂ, ಆ ಹಣದಿಂದ ತಿನ್ನುವುದೂ ತೀರಿ ಹೋಯಿತು. ಇನ್ನು ಉಳಿದುದೆಲ್ಲಾ ಒಂದು ಕಪಿಲೆ ದನಮಾತ್ರ. ಒಲೆಯಮೇಲೆ ಇಡಲು ಏನೂ ಇಲ್ಲದ್ದರಿಂದ, 'ಆ ಹಸುವನ್ನುಕೂಡಾ ಮಾರಿ ಬಾ' ಎಂದು ತಾಯಿ ಗಂಗಣ್ಣನೊಡನೆ ಹೇಳಿದಳು.

ಗಂಗಣ್ಣ ಹಸುವನ್ನು ಹೊಡೆದುಕೊಂಡು ಸಂತೆಗೆ ನಡೆದ. ದಾರಿಯಲ್ಲಿ ಒಬ್ಬ ಮುದುಕನು ಕಾಣಿಸಿ ಅವನ ಯೋಗಕ್ಷೇಮಗಳನ್ನು ವಿಚಾರಿಸಿದನು. ಗಂಗಣ್ಣ ಎಲ್ಲವನ್ನೂ ಬಿಡಿಸಿ ಹೇಳಿದ. ಅದಕ್ಕೆ ಮುದುಕ—"ಓಶ್! ಇಷ್ಟೊಂದಕ್ಕೆ ಸಂತೆಗೆ ಹೋಗುವುದೊ? ಈ ದನವನ್ನು ನನಗೆ ಕೊಟ್ಟುಬಿಡು. ಬದಲಿಗೆ ವಿಚಿತ್ರವಾದ ಚೌಳೀಬೀಜ ಕೊಡುತ್ತೇನೆ. ಅವು ನಿನಗೆಷ್ಟು ಸೌಭಾಗ್ಯವನ್ನು ತರುವುದೋ ನೋಡು. ನಿನಗೇ ತಿಳಿಯುತ್ತೆ" ಎಂದ.

ಅದನ್ನು ನಂಬಿ ಗಂಗಣ್ಣ ತನ್ನ ಕಪಿಲೆ ದನವನ್ನು ಅವನಿಗೆ ಕೊಟ್ಟು ಅವನು ಕೊಟ್ಟ ಚೌಳೀಬೀಜವನ್ನು ಪಡೆದುಕೊಂಡು ಮನೆಸೇರಿದ.





ಎಚ್. ಎಸ್. ರವಿಕುಮಾರ್, ಹಾಸನ್

# ತ್ರಿರಂಗಿ ಧ್ವಜ

ಗಾಳಿಲಿ ಪಟಪಟ । ಹಾರಲಿ ಧ್ವಜಪಟ
ಏರಲಿ ಬಾನೆತ್ತರಕೇ ॥
ಹಿಗ್ಗಲಿ ಹಿರಿಹಿರಿ । ಮಿರುಗಲಿ ಮಿರಿಮಿರಿ ।
ಬೆಳಕಿ ನೊಳೆತ್ತರಕೇ ॥
ತ್ಯಾಗದೊಳೈಕ್ಯವು । ಕೇಸರಿ ವರ್ಣವು ।
ರಕ್ತಾರ್ಪಣದಾ ಗಳಿಕೆ ॥
ಸ್ನೇಹಸಮಾನತೆ । ಸೂಸುವ ಧವಳತೆ ।
ಮೈತ್ರಿಯ ಚಿರಗುಣಿಕೆ ॥
ಶಾಂತಿಯು ಹೊನಲು । ಪಚ್ಚೆ ಸುಮಂಗಲಿ ।
ತರಲಿ ಸಮೃದ್ಧಿಯ ಇಳೆಗೆ ॥
ಧರ್ಮದ ಚಕ್ರವು । ಸತ್ಯಕೆ ರಕ್ಷೆಯು ।
ಕರ್ಮಕೆ ಕೈಬೆಳಕೇ ॥
ಹಾರಲಿ ಬಾವುಟ । ಬೆಳಗಲಿ ಕರ್ಮಠ ।
ನೆನಸಾಗಲಿ ನಮ್ಮಣಿಕೆ ॥
ಬಿಡದೀ ಧ್ವಜವಾ । ಅಡಿಮುಂದಿಡುವಾ ।
ಇದೇನಮ್ಮ ಹೆಗ್ಗಳಿಕೆ ॥

—ಕೆ. ಸೀತಾರಾಮ, ಅಡಿಗ ಫಲಿಮಾರು



ವಿ. ಮಾರ್ಕಂಡೇಯರಾವ್

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1953 ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಆಗಸ್ಟ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸವುದಿಲ್ಲ.
ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಸೆಪ್ಟೆಂಬರ್ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಚಾಣಾಕ್ಯತಿ

ಎರಡನೇ ಫೋಟೋ: ಹಸ್ತಾಕೃತಿ

ಕಳಿಸಿದವರು: ಶಂಕರ, ಕೊಂಗಿ, ಹುಬ್ಬಳ್ಳಿ.

ಸೆಪ್ಟೆಂಬರ್ ಸಂಚಿಕೆಯಲ್ಲಿ ಈ ಮೇಲಿನ ಶೀರ್ಷಿಕೆಗಳು ಬರುತ್ತವೆ. ಸದರಿ ಬಹುಮಾನದ ಮೊಬಲಗು ರೂ. 10/- ನ್ನು ಸೆಪ್ಟೆಂಬರ್ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.

Printed by B. NAGI REDDI at the B. N. K. Press Ltd., Madras 26, and Published by him ,for Chandamama Publications, Madras 26. Controlling Editor : SRI CHAKRAPANI

Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ಭಾರತೀಯ ಹೆಗ್ಗಳಿಕೆ

ಕಳಿಸಿದವರು:
ಶ್ರೀಮತಿ ರಮಾ, ಮಂಗಳೂರು

